# ಈ ಪುಣ್ಯಕಾರ್ಯದಲ್ಲಿ ಪಾಲ್ಗೊಳ್ಳಿರಿ!

ಅನ್ನ ಮತ್ತು ಜ್ಞಾನ ದಾಸೋಹದ ಮಹಾ ಕೇಂದ್ರವಾಗಿ ಶ್ರೀ ಸಿದ್ಧಗಂಗಾ ಭಾರತದಲ್ಲೇ ಖ್ಯಾತಿಗಳಿಸಿದೆ ಶತಮಾನಗಳಿಂದ ನಡೆಸುತ್ತಿರುವ ಸೇವೆ ಎಲ್ಲರನ್ನು ಆಕರ್ಷಿಸಿದೆ, ಮೆಚ್ಚುಗೆ ಪಡೆದಿದೆ.

ತ್ರಿವಿಧ ದಾಸೋಹ ಕಾರ್ಯಗಳು ನಿರ್ವಿಘ್ನವಾಗಿ ನಡೆಯಲು
ಪೂಜ್ಯ ಸನ್ನಿಧಿಯವರು ಅಹರ್ನಿಸಿ ದುಡಿಯುತ್ತಿದ್ದಾರೆ.

ಈ ಮಹತ್ಕಾರ್ಯಕ್ಕೆ ಸಾರ್ವಜನಿಕರ ನೆರವೇ ಸಂಸ್ಥೆಯ ಮಹಾನಿಧಿ ಎಂದು ಶ್ರೀ ಶ್ರೀಗಳವರು ಹೇಳುತ್ತಿದ್ದಾರೆ. ನಾಡಿನ ಸಹಸ್ರ ಸಹಸ್ರ ಧರ್ಮಾಭಿಮಾನಿಗಳೇ ಶ್ರೀ ಕ್ಷೇತ್ರಕ್ಕೆ ಶ್ರೀರಕ್ಷೆ ಎಂದು ಭಾವಿಸಿದ್ದೇವೆ.

ಧನ ಸಹಾಯ:

— ಪ್ರತಿ ತಿಂಗಳು ಯಥಾ ಶಕ್ತಿ ನಿಮ್ಮ ಕಾಣಿಕೆ ಕಳುಹಿಸಿ.

ಕೂಡಿಟ್ಟು ಕಳುಹಿಸಿ:

— ಒಂದೇ ಬಾರಿಗೆ ದಾನ ನೀಡುವುದು ಹಲವರಿಗೆ ಕಷ್ಟ.
— ಹಾಗಿದ್ದಲ್ಲಿ ಶ್ರೀ ಕ್ಷೇತ್ರದ ಹುಂಡಿಯನ್ನು ನಿಮ್ಮ ಮನೆಯಲ್ಲಿಡಿ.
— ನಿತ್ಯ ಹಾಕಿ ಸಂಗ್ರಹಿಸಿ ವರ್ಷಕ್ಕೊಮ್ಮೆ ಶ್ರೀ ಮಠಕ್ಕೆ ಕಳುಹಿಸಿರಿ.

ಧಾನ್ಯ ಸಂಗ್ರಹಣೆ:

— ಪ್ರತಿ ವರ್ಷ ಸುಗ್ಗಿಯಲ್ಲಿ ಧಾನ್ಯವನ್ನು ಮುಡುಪಾಗಿಡಿ.
— ನೀವು ಬಂದಾಗ ಅರ್ಪಿಸಿ. ನಿಮ್ಮ ಕಾಳುಗಳು ರಾಶಿಯಾಗಿ ದಾಸೋಹಕ್ಕೆ ವಿನಿಯೋಗವಾಗಲಿ.

**ಸಹಸ್ರಾರು ಬಡಮಕ್ಕಳ ಆಶ್ರಯ ಕೇಂದ್ರ "ಸಿದ್ಧಗಂಗಾ".**
**ಇಲ್ಲಿಗೆ ನೀಡಿದ ಉದಾರ ಹೃದಯದ ನಿಮ್ಮ ದಾನ**
**ನಿತ್ಯ ದಾಸೋಹಕ್ಕೆ ವಿನಿಯೋಗವಾಗುತ್ತದೆ.**

ಹಣವನ್ನು ಕಳುಹಿಸುವವರು, ಎಂ. ಒ., ಚೆಕ್ ಅಥವಾ ಬ್ಯಾಂಕ್‌ಡ್ರಾಫ್ಟ್‌ನ್ನು

ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು

ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲಾ-572131.

ಇವರಿಗೇ ನೇರವಾಗಿ ಕಳುಹಿಸಿ.

ಇತಿ, ಭಕ್ತಮಂಡಲಿ.

'ಸಿದ್ಧಗಂಗಾ'

ಏಪ್ರಿಲ್, ೧೯೭೬

ಸಂಪುಟ–೧೨ ಸಂಚಿಕೆ–೫

ಮುಖ ಪುಟ

ನೀ "ಕಾಯಕವೇ ಕೈಲಾಸ" ಎಂದು ಸಾರಿದೆ ।
'ಜಗಜ್ಯೋತಿ" ಯೆನಿಸಿ ಇಳೆಯ ಕತ್ತಲೆ ಕಳೆದೆ ॥


ಪ್ರಕಾಶಕರು
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ
ಹೆಚ್. ಬಿ. ಗಂಗಾಧರಯ್ಯ

ಸಂಪಾದಕರು
ಸಂ|| ಚನ್ನಪ್ಪ ಎರೇಸೀಮೆ
ಕೆ. ಜಿ. ರಂಗಯ್ಯ

ಜಾಹೀರಾತು ವ್ಯವಸ್ಥಾಪಕರು
ಎಂ. ರೇಣುಕಾರಾಧ್ಯ

ಸಂಚಿಕೆಯ ವ್ಯವಸ್ಥಾಪಕರು
ಎಸ್. ಗಂಗರುದ್ರಪ್ಪ

ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ

ಪ್ರಕಟನೆಯ ಸ್ಥಳ
ಶ್ರೀ ಸಿದ್ಧಗಂಗಾ ಕ್ಷೇತ್ರ

ಚಂದಾ ವಿವರ
ವಾರ್ಷಿಕ ಚಂದಾ: 10 ರೂ
ಅಜೀವ ಸದಸ್ಯತ್ವ: 101 ರೂ




# ಶ್ರೀವಾಣಿ

ಪ್ರಗತಿ ಅರ್ಥವತ್ತಾಗಬೇಕಾದರೆ ಪ್ರಾಥಮಿಕ ಬಯಕೆಗಳು ಪ್ರತಿವ್ಯಕ್ತಿಗೂ ಪೂರೈಕೆಯಾಗಬೇಕು. ಅಧಿಕವಾದ ವೈಭವಯುತ ಜೀವನ ಬೇಕಾಗಿಲ್ಲ. ಎರಡು ಹೊತ್ತು ನಿರಾಳ ಗಂಜಿಗೆ ಅವಕಾಶವಿದ್ದರೆ ಸಾಕು.

ಬಚ್ಚಲು ನೀರು, ಚರಂಡಿಯ ನೀರನ್ನು ತೋಟಕ್ಕೆ ಹಾಯಿಸಿದಾಗ ತೋಟ ಹಚ್ಚ ಹಸುರಾಗಿ ಕಂಗೊಳಿಸುತ್ತದೆ. ತರಕಾರಿ ಬೆಳೆಯುತ್ತದೆ, ಬಣ್ಣ ಬಣ್ಣದ ಸುವಾಸನೆಯ ಹೂವು ಅರಳುತ್ತವೆ. ಹೊಟ್ಟೆಗೆ ತರಕಾರಿ, ಕಣ್ಣುಗಳ ಸೊಬಗಿಗೆ ಚೆಲುವಿನ ಸ್ವರ್ಗ, ಭಗವಂತನ ಪೂಜೆಗೆ ತರ ತರದ ಹೂವುಗಳು! ಹೊಲಸನ್ನ ಒಂದೇ ಕಡೆ ತಡೆಹಿಡಿದು ನಿಲ್ಲಿಸಿದರೆ ದುರ್ವಾಸನೆ, ಅಸಹ್ಯ ದೃಶ್ಯ. ಅದೇ ಹೊಲಸನ್ನ ಹರಿಯಗೊಟ್ಟು ಪರಿವರ್ತಿಸಿದರೆ ಪವಿತ್ರ ವಾತವರಣ ಸೃಷ್ಟಿಯಾಗಿ ದಿವ್ಯಾನುಭವಕ್ಕೆ ಕಾರಣವಾಗುತ್ತದೆ. ಹಾಗೆಯೇ ಮನುಷ್ಯನ ದುಷ್ಟ ಶಕ್ತಿಯನ್ನು ಸದುದ್ದೇಶ ಸಾಧನೆಯ ಕಡೆ ಹಾಯಿಸಿದಾಗ ಅದ್ಭುತವಾದ ಸತ್ಕಾರ್ಯ ಸಾಧನೆಯಾಗುವುದರಲ್ಲಿ ಯಾವ ಸಂದೇಹವೂ ಇಲ್ಲ.

ಸ್ವಾತಂತ್ರ್ಯ ಕಾಲದಲ್ಲಿ ವಿದ್ಯಾರ್ಥಿಗಳು ಮಹತ್ತರ-ವಾದ ಪಾತ್ರ ವಹಿಸಿದರು. ಅಮೋಘ ಸೇವೆ ಸಲ್ಲಿಸಿರುವ ವಿದ್ಯಾರ್ಥಿಗಳು ಗುರಿ ಸೇವೆ ಲಭ್ಯವಾದ ಮೇಲೆ ದೇಶದ ಪರಿಸ್ಥಿತಿ ಮರೆತಿದ್ದು ಶೋಚನೀಯ. ಜನತೆ ನಿರೀಕ್ಷಣೆ ಮಾಡಿದ್ದ ನಿಲುವಿಗೆ ಮುಟ್ಟಿದಾಗ ಮಾತ್ರ ಉದ್ಧಾರ ಸಾಧ್ಯ. ಅದಕ್ಕಾಗಿ ತರುಣರು ಮಹತ್ತರ ಪಾತ್ರ ವಹಿಸಬೇಕು.

ಕ್ರಮಬದ್ಧ ಜೀವನ ಪ್ರಗತಿಯ ಮೂಲ, ಅಕ್ರಮ ಜೀವನ ವಿನಾಶಕ್ಕೆ ಹಾದಿ. ಆದ್ದರಿಂದ ಎಲ್ಲಾ ವ್ಯವಹಾರ ಕ್ರಮದಿಂದ ಸಾಗುವ ವ್ಯವಸ್ಥೆಯಾದಾಗ ಜೀವನದಲ್ಲಿ ಸುಖ, ಶಾಂತಿ. ಹಾಗೆ ಮಾಡಲು ವ್ಯಕ್ತಿಯ ಪ್ರಯತ್ನ ಬಹಳ ಮುಖ್ಯ.

(ಸಾಧಾರ)

## ಪರಿವಿಡಿ



## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಮಾಸ ಪತ್ರಿಕೆಯು ಲೇಖಕರಿಂದ ವಿಚಾರ ಪ್ರಚೋದಕವಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಧರ್ಮ, ಸಂಸ್ಕೃತಿ; ಸಾಮಾಜಿಕ, ಐತಿಹಾಸಿಕ ಹಾಗೂ ಸ್ಥಳ ಮಹಾತ್ಮೆಗಳಿಗೆ ಸಂಬಂಧಿಸಿದವುಗಳಾದರೆ ಹೆಚ್ಚು ಆದ್ಯತೆ ನೀಡಲಾಗುವುದು. ಪ್ರಚಲಿತ ಸಾಮಾಜಿಕ ಜೀವನದ ಸಮಸ್ಯೆಗಳನ್ನು ಬಿಂಬಿಸುವ ಹಾಗೂ ಅವುಗಳಿಗೆ ಪರಿಹಾರ ಸೂಚಿಸುವ ಸಣ್ಣಕಥೆ, ಕವನ ಮತ್ತು ಪ್ರಬಂಧಗಳಿಗೂ ಸ್ವಾಗತವುಂಟು. ಲೇಖನಗಳು ಫುಲ್‌ಸ್ಕೇಪ್ ಸೈಜಿನ 3 ಪುಟಗಳಿಗೆ ಮೀರದಂತಿರಬೇಕು. ಸ್ವೀಕೃತವಾದ ಲೇಖನಗಳಿಗೆ "ಸಿದ್ಧಗಂಗಾ" ಆಗಿಂದಾಗ್ಗೆ ನಿಗದಿ ಮಾಡಿಕೊಳ್ಳುವ ಸಂಭಾವನೆಯನ್ನು ನೀಡಲಾಗುವುದು. ಲೇಖನಗಳನ್ನು ಸ್ಫುಟವಾಗಿ ಕಾಗದದ ಒಂದೇ ಮಗ್ಗುಲಲ್ಲಿ ಬರೆದು "ಸಂಪಾದಕರು"

'ಸಿದ್ಧಗಂಗಾ' [ಕನ್ನಡ ಮಾಸಪತ್ರಿಕೆ]
ಶ್ರೀ ಸಿದ್ಧಗಂಗಾ ಕ್ಷೇತ್ರ -572131
ತುಮಕೂರು ಜಿಲ್ಲೆ

ಇವರಿಗೆ ಕಳುಹಿಸಿಕೊಡಬೇಕಾಗಿ ವಿನಂತಿ.


## ಬೇಕಾಗಿದ್ದಾರೆ

### ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಪ್ರಿಂಟಿಂಗ್ ಪ್ರೆಸ್, ಶ್ರೀ ಸಿದ್ಧಗಂಗಾ ಮಠ
### ತುಮಕೂರು ಜಿಲ್ಲೆ

ಕಂಪೋಜಿಂಗ್, ಪ್ರಿಂಟಿಂಗ್ ಮತ್ತು ಬೈಂಡಿಂಗ್ ಕೆಲಸಗಳಲ್ಲಿ ನುರಿತ ಕೆಲಸಗಾರರು ಬೇಕಾಗಿದ್ದಾರೆ ಕೆಲಸದ ಸಾಮರ್ಥ್ಯ ಹಾಗೂ ಅನುಭವದ ಮೇಲೆ ವೇತನ ಕೊಡಲಾಗುವುದು. ತಾ|| 31-5-76 ರೊಳಗಾಗಿ ಶ್ರೀ ಶ್ರೀ ಸ್ವಾಮಿಗಳು, ಶ್ರೀ ಸಿದ್ಧಗಂಗಾ ಕ್ಷೇತ್ರ ಅವರನ್ನು ಭೇಟಿಮಾಡಿ.

ಮಾನವೀಯತೆಯ ಸಾಕಾರ ಸ್ವರೂಪ

# ಜಗಜ್ಯೋತಿ ಬಸವೇಶ್ವರ

—ಇಂದಿರಾ

### ಅರಸಿದವರ ಆಶ್ರಯಧಾಮ:

ಬಸವಣ್ಣನವರು ಒಂದು ವ್ಯಕ್ತಿಯಲ್ಲ, ಅವರೊಂದು ಶಕ್ತಿಎನ್ನಬಹುದು, ಇಂದಿನಕಲುಷಿತ, ದುರ್ಭರ ಪರಿಸ್ಥಿತಿಯಲ್ಲಿ ಅವರ ಸಾಮಾಜಿಕ ತತ್ವಗಳ ಆಚರಣೆಯ ಅಗತ್ಯವಿದೆ. ಹಿಂದಿಗೂ, ಇಂದಿಗೂ ಎಂದಿಗೂ ಸರ್ವ ಮಾನ್ಯವಾಗುವ ಅವರ ತತ್ವ ಆಚರಣೆಗಳಲ್ಲಿ ಮಾನವೀಯತೆ ಪ್ರಮುಖವಾಗಿದೆ. ಅಂಧ ಶ್ರದ್ಧೆ, ಅನ್ಯಾಯ, ಡಂಭಾಚಾರ, ಅಸ್ಪೃಶ್ಯತೆ, ಅಸಮಾನತೆಯ ವಿರುದ್ಧ ಅವರ ಹೋರಾಟ ಅಸಮಾನ್ಯವಾಗಿದೆ. ವಿಶ್ವಭ್ರಾತೃತ್ವ, ಅಸಮಾನತೆ, ಪ್ರಾಮಾಣಿಕ ಜೀವನ ಸತ್ಯ ನ್ಯಾಯಗಳೇ ಅವರ ಆಯುಧಗಳಾಗಿದ್ದುವು. ಅವರ ಚಿಂತನ, ಮಂಥನ, ದರ್ಶನಗಳೆಲ್ಲವೂ ಮಾನವತನಕ್ಕೆ ಸೋಪಾನ- ನಿಜ ಭಕ್ತಿ ಅರಸಿದವರಿಗೆ ಆಶ್ರಯಧಾಮ. ಎಲ್ಲಾ ಆದರ್ಶ ಧ್ಯೇಯಗಳ ಸಾಕಾರ ಸ್ವರೂಪ. ಅವರು ಕಟ್ಟಿ ಬೆಳೆಸಿದ "ಅನುಭವ ಮಂಟಪ" "ನಡೆದಂತೆ ನುಡಿ ನುಡಿದಂತೆ ನಡೆ, ಇವೆರಡು ಶ್ರೀಗುರುವಿನ ಅಡಿ" ಎಂಬುದಾಗಿ ಅನುಭವ ಮಂಟಪದ ಮುಖದ್ವಾರದಲ್ಲಿ ಬರೆಯಲಾಗಿತ್ತೆಂದು ಹೇಳಲಾಗಿದೆ. ಅನುಭವ ಮಂಟಪವಿದ್ದ ಕಲ್ಯಾಣಪಟ್ಟಣವನ್ನು ಕುರಿತು ಅಕ್ಕ ಮಹಾದೇವಿ ಈ ರೀತಿ ಹೇಳಿದ್ದಾಳೆ:— "ಕಲ್ಯಾಣವೆಂಬುದನು ಅರಸಿ ಹೊಗಬಾರದು, ಹೊಗಬಾರದು, ಹೊಗಬಾರದು; ಅಸಾಧ್ಯವಯ್ಯಾ; ಆಸೆ ಆಮಿಷಂಗಳಳಿದವರಿಂಗಲ್ಲದೆ ಕಲ್ಯಾಣದತ್ತ ಅಡಿಯಿಡಬಾರದು; ಒಳಹೊರಗು ಶುದ್ಧವಾದವರಿಂಗಲ್ಲದೆ ಕಲ್ಯಾಣವ ಹೊಗಬಾರದು; ನಾನೆಂಬುದ ಅರಿದವರಿಂಗಲ್ಲದೆ ಕಲ್ಯಾಣವ ಹೊಗಬಾರದು, ಒಳಗು ತಿಳಿದು ಚೆನ್ನಮಲ್ಲಿಕಾರ್ಜುನಂಗೊಲಿದು ಕಲ್ಯಾಣವ ಕಂಡು ನಮೋ ನಮೋ ಎನುತಿದ್ದೆನು" ಹೇಳುವಲ್ಲಿ ಅನುಭವ ಮಂಟಪದ ಹಿರಿಮೆ ಅದನ್ನು ಸ್ಥಾಪಿಸಿದ ಬಸವಣ್ಣನವರ ಕರ್ತೃತ್ವಸಾಧನೆ ಕಂಡು ಬರುತ್ತದೆ.

### ಜ್ಯಾತ್ಯತೀತ ಭಾವನೆ:

ನಮ್ಮ ರಾಜ್ಯಾಂಗದ 12 ನೇ ವಿಧಿಯು ಪರಂಪರಾನುಗತದ ಅಸ್ಪೃಶ್ಯತೆಯನ್ನು ನಿಷೇಧಿಸಿದೆ. ಆದರೂ ಸಹ ಇಂಗದಿಗೂ ಹಳ್ಳಿಗಳಲ್ಲೇ ಏಕೆ ಪಟ್ಟಣಗಳಲ್ಲಿಯೂ ಅಸ್ಪೃಶ್ಯತೆಯು ಇದೆ. ಅದನ್ನು ನಿಷೇಧಿಸುವರೂ ಅದರ ವಿರುದ್ಧ ಹೋರಾಡುವವರೂ, ಅದನ್ನು ಸರ್ಕಾರದ ಗಮನಕ್ಕೆ ತಳುವವರಿಲ್ಲ. ಅದೂ ಒಂದು ಧರ್ಮವೆಂಬ ಭಾವನೆ ಜನರಲ್ಲಿ ಬೆಳೆದಿದೆ. ಹರಿಜನರಿಗಾಗಿ ಪ್ರತ್ಯೇಕ ಸವಲತ್ತು, ಹಕ್ಕು, ಕರ್ತವ್ಯಗಳನ್ನು ಒದಗಿಸಿಕೊಟ್ಟ ಈ ಕಾಲದಲ್ಲಿ ಅಸ್ಪೃಶ್ಯತೆ ಇಷ್ಟೊಂದು ಪರಿಣಾಮಕಾರಿಯಾಗಿದೆ. ಯಾವುದೇ ವಿಧವಾದ ರಕ್ಷಣೆಯನ್ನು ಕಾಣದ ಸುಮಾರು 800 ವರ್ಷಗಳ ಹಿಂದಿನ ದೀನದಲಿತರ ಜೀವನ ನಮ್ಮ ಊಹೆಗೂ ನಿಲುಕದು. ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ, ಹರಿಜನ ಬಂಧುವಾಗಿ ಬಂದವರು ಬಸವಣ್ಣನವರು. "ನೆಲನೊಂದೇ ಹೊಲಗೇರಿ ಶಿವಾಲಯಕ್ಕೆ, ಜಲವೊಂದೇ ತನ್ನ ಶಾನಿಕದವಂಗೆ" ಎಂದು ಮಾನವರೆಲ್ಲಾ ಒಂದೇ ಎಂಬುದನ್ನು ಹೇಳಿದರು. ಇವನಾರವ, ಇವನಾರವ,

ಇವನಾರವ ಎಂದೆನಿಸಿದಿರಯ್ಯಾ, ಇವ ನಮ್ಮವ, ಇವ ನಮ್ಮವ, ಇವ ನಮ್ಮವ ಎಂದೆನಿಸಯ್ಯಾ, ಕೂಡಲ ಸಂಗಮ ದೇವಾ, ನಿಮ್ಮ ಮನೆಯ ಮಗ ಎಂದೆನಿಸಯ್ಯಾ" ಎಂದು 'ವಿಪ್ರಜ ಮೊದಲಾಗಿ ಅಂತ್ಯಜ ಕಡೆಯಾಗಿ' ಎಲ್ಲರೂ ಸಮಾನರು.

"ಕೊಲ್ಲುವನೆ ಮಾದಿಗ ಹೊಲಸ ತಿಂಬುವ
ಹೊಲೆಯ!
ಕುಲವೇನೋ ಆವಂದಿರ ಕುಲವೇನೋ ಸಕಲ
ಜೀವಾತ್ಮಂಗೆ
ಲೇಸನೇ ಬಯಸುವ ನಮ್ಮ ಕೂಡಲ ಸಂಗನ
ಶರಣರೇ ಕುಲಜರು"

ಎಂದು ಜಾತ್ಯಾತೀತ ಭಾವನೆಯನ್ನು ತೋರಿದ್ದಾರೆ. ಜಾತಿ, ಕುಲ, ಭೇದ ಭಾವಗಳಿಂದ ವ್ಯಕ್ತಿಯ ಹಿರಿಮೆಯನ್ನು ಅಳೆಯಲಾಗದು. ವೃತ್ತಿಯಿಂದ ಮಾತ್ರ ಕುಲವನ್ನು ಗಣಿಸಬಹುದು ಎನ್ನುತ್ತಾ—

ಕಾಸಿ ಕಮ್ಮಾರನಾದ; ಬೀಸಿ ಮಡಿವಾಳನಾದ;
ಹಾಸನಿಕ್ಕಿ ಸಾಲಿಗನಾದ; ವೇದವನೋದಿ
ಹಾರುವನಾದ,
ಕರ್ಣದಲ್ಲಿ ಜನಿಸಿದವರುಂಟೆ ಜಗದೊಳಗೆ?
ಇದು ಕಾರಣ ಕೂಡಲ ಸಂಗಮದೇವಾ
ಲಿಂಗಸ್ಥಲವನರಿದವನೆ ಕುಲಜನು" ಎಂದು ವೃತ್ತಿಯನ್ನು ಘನತೆ ಎಂಬುದಾಗಿ ತಿಳಿಯಬಾರದು, ಅದರಿಂದ ಮೇಲು ಕೀಳು ಎಂಬ ಭಾವನೆ ಸಲ್ಲದು. ದೇವನ ದೃಷ್ಟಿಯಲ್ಲಿ ಎಲ್ಲರೂ ಸಮಾನರು.

ಅವರು ರಚಿಸಿದ ಅನುಭವ ಮಂಟಪವಾದರೋ, ಇದಕ್ಕೆ ಪ್ರತೀಕವಾಗಿದ್ದಿತು. ಅಲ್ಲಿ ಎಲ್ಲರೂ ಸಮಾನರು. ಡೋಹರ ಕಕ್ಕಯ್ಯ, ಮಾದರ ಚೆನ್ನಯ್ಯ, ಮಡಿವಾಳ ಮಾಚಯ್ಯ, ಹಡಪದ ಅಪ್ಪಣ್ಣ ಮುಂತಾದವರು ದಲಿತವರ್ಗಕ್ಕೆ ಸೇರಿದವರು ಅನುಭವ ಮಂಟಪದಲ್ಲಿ ಒಗ್ಗೂಡಿ, ಬಿಚ್ಚು ಮನಸ್ಸಿನಿಂದ ವಿಚಾರ ವಿಮರ್ಶೆ, ಸಹಜೀವನ ನಡೆಸುತ್ತಿದ್ದುದು ಇದಕ್ಕೆ ಪ್ರತ್ಯಕ್ಷ ನಿದರ್ಶನ.

'ಸೆಟ್ಟಿ ಎಂದೆಂಬೆನೆ ಸಿರಿಯಾಳನ? ಮಡಿವಾಳನೆಂದೆಂಬೆನೆ ಮಾಚಯ್ಯನ? ಡೋಹಾರನೆಂದೆಂಬೆನೆ ಕಕ್ಕಯ್ಯನ? ಮಾದರನೆಂದೆಂಬೆನೆ ಚೆನ್ನಯ್ಯನ? ಆನು ಹಾರುವನೆಂದರೆ ಕೂಡಲ ಸಂಗಯ್ಯ ನಗುವನಯ್ಯ" ಎಂದು ಬಸವಣ್ಣನವರು, ಸರ್ವ ಸಮಾನತೆಯನ್ನು ಪ್ರತಿಪಾದಿಸಿದರು. "ಅಪ್ಪನು ನಮ್ಮ ಮಾದಾರ ಚೆನ್ನಯ್ಯ; ಬೊಪ್ಪನು ನಮ್ಮ ಡೋಹರ ಕಕ್ಕಯ್ಯ; ಚಿಕ್ಕಯ್ಯ ನಮ್ಮಯ್ಯ ಕಾಣಿರಯ್ಯ; ಅಣ್ಣನು ನಮ್ಮ ಕಿನ್ನರಿ ಬೊಮ್ಮಯ್ಯ ಎನ್ನ ನೇತಕ್ಕರಿಯರಿ ಕೂಡಲ ಸಂಗಯ್ಯ" ಎಂಬ ವಚನದಿಂದ ಬಸವಣ್ಣನವರಲ್ಲಿನ ಭ್ರಾತೃತ್ವ ಭಾವನೆ ತಿಳಿದು ಬರುತ್ತದೆ. "ಮಾನವ ಪ್ರಮುಖ; ವೃತ್ತಿಯಿಂದ ಜಾತಿಯೇ ವಿನಹ ಹುಟ್ಟನಿಂದಲ್ಲ; ಎಲ್ಲರೂ ಸಮಾನರು; ಎಲ್ಲರೂ ಭೇದಭಾವವಿಲ್ಲದೆ ಸಹಜೀವನ ನಡೆಸಬೇಕೆಂದು, ಅಸ್ಪೃಶ್ಯತಾ ನಿವಾರಣೆಯನ್ನು ಸಾಧಿಸಿ ತೋರಿಸಿದ ಮಹಾನುಭಾವರು ಬಸವಣ್ಣನವರು"

ಮಾನವ ಪ್ರಾಮಾಣಿಕ, ನ್ಯಾಯನಿಷ್ಠುರ ಸತ್ಯಸಂಧನಾಗಿರಬೇಕೆಂದು ಹೇಳುತ್ತಾ—

"ಕಳಬೇಡ ಕೊಲಬೇಡ ಹುಸಿಯ ನುಡಿಯಲು
ಬೇಡ
ಮುನಿಯಬೇಡ, ಅನ್ಯರಿಗೆ ಅಸಹ್ಯ ಪಡಬೇಡ
ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ
ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ
ಇದೇ ನಮ್ಮ ಕೂಡಲ ಸಂಗಮ ದೇವನೊಲಿಸುವ
ಪರಿ"

ಎಂಬ ಸೂತ್ರವನ್ನು ಮಾನವನ ಸರಳ ಸುಖಮಯ ಪ್ರಾಮಾಣಿಕ ಜೀವನಕ್ಕಾಗಿ ಬೋಧಿಸಿದರು. ಜನ, ಡಂಭಾಚಾರ, ಅಂಧಶ್ರದ್ಧೆ, ಆಡಂಬರಕ್ಕೆ ಮಾನ್ಯತೆ ಕೊಟ್ಟು ಸ್ವರ್ಗದಾಸೆಗಾಗಿ, ಇಹದಲ್ಲಿ ಅಸಮಾನತೆ ಅನ್ಯಾಯಗಳಿಗೆ ತಲೆಬಾಗಿದಾಗ "ಮರ್ತ್ಯ ಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ; ಇಲ್ಲಿ ಸಲ್ಲುವರು, ಅಲ್ಲಿಯೂ ಸಲ್ಲುವರಯ್ಯಾ; ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯಾ ಕೂಡಲ ಸಂಗಮದೇವಾ" ದೇವ ಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿಭೋ! ಸತ್ಯವ ನುಡಿವುದೇ ದೇವಲೋಕ; ಮಿಥ್ಯವ ನುಡಿವುದೇ ಮರ್ತ್ಯಲೋಕ! ಆಚಾರವೇ

ಸ್ವರ್ಗ, ಅನಾಚಾರವೇ ನರಕ ! ಕೂಡಲ ಸಂಗಮ ದೇವಾ, ನೀವೇ ಪ್ರಮಾಣ " — ಎಂದು ಮನುಷ್ಯನ ಸ್ವರ್ಗ ಸುಖದ ಆವಿ.ಷ್ಯಕ್ಕೆ ಬಲಿಯಾಗದೆ' ಇಹದಲ್ಲಿಯೇ ಸಹಬಾಳ್ವೆ, ಸತ್ಯ ಜೀವನ ನಡೆಸಬೇಕೆಂದು ಕರೆಯಿತ್ತರು " ಅಯ್ಯಾ' ಎಂದೊಡೆ ಸ್ವರ್ಗ, ಎಲವೋ ಎಂದೊಡೆ ನರಕ " ಎಂದು ಸ್ವರ್ಗ–ನರಕಗಳು ಸತ್ತನಂತರ ಸಿಗುವವಲ್ಲ ಇಹದಲ್ಲಿ ಸಹೃದಯರಾಗಿ ಬಾಳ್ವೆ ನಡೆಸಿದಲ್ಲಿ ಅದಕ್ಕಿಂತ ಮತ್ತಾವ ಸ್ವರ್ಗವೂ ಇಲ್ಲವೆಂದು ಸಾಧಿಸಿ ತೋರಿಸಿ ಕೊಟ್ಟರು.

**ಕಪಟನೀತಿಯ ಖಂಡನೆ:**

ಬಾಯಲ್ಲಿ ಹರಿ ಹರಿ, ಬಗಲಲ್ಲಿ ಚೂರಿ ಒಳಗೆ ಕುಟಿಲ ಹೊರಗೆ ವಿನಯವನ್ನು ತೋರಿಸುವ ಕಪಟ ನೀತಿಯನ್ನು ಕಂಡು, " ಮನೆಯೊಳಗಣ ಕಿಚ್ಚು ಮನೆಯನೇ ಸುಟ್ಟದಲ್ಲದೆ ಎಂದೂ–ಅಂಥಹವರ ಹೃದಯ ಹುಲ್ಲು, ಧೂಳು ಕಸಮಿಶ್ರಿತದ ವೆಂದೂ.— "

" ಮನೆಯೊಳಗೆ ಮನೆಯೊಡೆಯನಿದ್ದಾನೊ
ಇಲವೋ
ಹೊಸ್ತಿಲಲ್ಲಿ ಹುಲ್ಲು ಹುಟ್ಟಿ ಮನೆಯೊಳಗೆ ರಜ
ತುಂಬಿ
ಮನೆಯೊಳಗೆ ಮನೆಯೊಡೆಯನಿದ್ದಾನೋ
ಇಲ್ಲವೋ
ತನುವಿನೊಳಗೆ ಹುಸಿ ತುಂಬಿ ಮನದೊಳಗೆ
ವಿಷಯ ತುಂಬಿ
ಮನೆಯೊಳಗೆ ಮನೆಯೊಡೆಯನಿಲ್ಲಾ ಕೂಡಲ
ಸಂಗಮದೇವಾ

ಆದಕ್ಕಾಗಿ ಆತ್ಮ ಶುದ್ಧಿ ಅಗತ್ಯ. ತನ್ನನ್ನು ತಾನೇ ಪ್ರಾಮಾಣಿಸಿ ನೋಡಿಕೊಳ್ಳಬೇಕು. ಅದಿಲ್ಲದೆ ಯಾವ ನೇಮ ನಿಷ್ಠೆಮಾಡಿದರೂ ಒಳಿತಾಗುವುದಿಲ್ಲ ವೆಂಬುದು ಅವರು ಹಾಕಿಕೊಟ್ಟ ಮಾರ್ಗ

" ಹುತ್ತವ ಬಡಿದೊಡೆ ಹಾವು ಸಾಯ ಬಲ್ಲುದೇ
ಅಯ್ಯಾ ?
ಘೋರ ತಪವ ಮಾಡಿದೊಡೇನು ? ಅಂತರಂಗ–
ಆತ್ಮಶುದ್ಧಿಯಿಲ್ಲದವರನೆಂತಾ
ನಂಬುವನಯ್ಯಾ ನಮ್ಮ ಕೂಡಲ ಸಂಗಮ
ದೇವಾ "

**ವ್ಯಕ್ತಿಯ ಪತನಕ್ಕೆ ಆರು ಜನ ಶತ್ರುಗಳು:**

ರಾಗ ದ್ವೇಷ ಹರಿಷಡ್ವರ್ಗಗಳೇ ನಮ್ಮ ಶತ್ರು. ಅವುಗಳನ್ನು ಬಿಡುವ ಛಲ ಬೇಕು. ಛಲಬೇಕು. ಶರಣಂಗೆ ಪರಸತಿಯನೊಲ್ಲೆನೆಂಬ ಎನ್ನುತ್ತಾ—

" ಪರವಧುವ ಮಹಾದೇವಿಯೆಂಬೆ
ಮಾತೆಯೆಂಬೆ, ಹರಿವ ಹಾವಿಗಂಜೆ,
ಉರಿವ ನಾಲಿಗೆಗಂಜೆ, ಸುರಗಿಯ
ಮನೆಗಂಜೆ, ಒಂದಕ್ಕಂಜುವೆ
ಒಂದಕ್ಕಳುಕುವೆ, ಪರಧನ,
ಪರ ಸ್ತ್ರೀಯೆಂಬ ಜೂಜಿಗಂಜುವೆ
ಮುನ್ನಂಜದ ರಾವಣನೆ
ವಿಧಿಗೊಳಗಾದ, ಅಂಜುವೆನಯ್ಯಾ ಕೂಡಲ
ಸಂಗಮದೇವಾ,

ಎಂದು ತಮ್ಮ ಆತ್ಮ ಪರೀಕ್ಷೆ ಮಾಡಿಕೊಳ್ಳುತ್ತಾ, ಪರರಿಗೆ ನೀತಿಯನ್ನು ಸಾರಿದ್ದಾರೆ. ಇಂತಹ ರಾಗ ದ್ವೇಷಗಳನ್ನು ಅಳಿಸುವ ಮಾರ್ಗವನ್ನು—

" ಜ್ಞಾನದ ಬಲದಿಂದ ಅಜ್ಞಾನದ ಕೇಡು
ನೋಡಯ್ಯಾ !
ಜ್ಯೋತಿಯ ಬಲದಿಂದ ತಮಂಧದ ಕೇಡು
ನೋಡಯ್ಯ !
ಸತ್ಯದ ಬಲದಿಂದ ಅಸತ್ಯದ ಕೇಡು ನೋಡಯ್ಯಾ !
ಪರುಷದ ಬಲದಿಂದ ಅವಲೋಹದ ಕೇಡು
ನೋಡಯ್ಯಾ !
ಕೂಡಲ ಸಂಗನ ಶರಣರ ಅನುಭಾವದಿಂದ
ಎನ್ನಭವದ ಕೇಡು ನೋಡಯ್ಯಾ !

ಎಂದು, ' ಅಸತೋಮಾಸದ್ಗಮಯ ' ವನ್ನು ಸರಳ ಮಾದರಿಯಲ್ಲಿ ಜನರ ಮನದಲ್ಲಿ ಮೂಡುವಂತೆ ಮಾಡಿ— ಅಜ್ಞಾನದ ಕಣ್ಣನ್ನು ತೆರೆಸಿದರು. ತಮ್ಮ ತಮ್ಮಲ್ಲೇ ವೈಷಮ್ಯದಿಂದ ಬುಸುಗುಡುತ್ತಾ ಹೆರವರಿಗೆ

ಉಪದೇಶಾಮೃತ ನೀಡುವವರು. ನುಡಿದಂತೆ ನಡೆಯದೆ, ನಡೆದಂತೆ ನುಡಿಯುದಿರುವವರನ್ನು ಕಂಡು

"ಲೋಕದ ಡೊಂಕ ನೀವೇಕೆ ತಿದ್ದುವಿರಿ
ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ
ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ
ನೆರೆ ಮನೆಯ ದುಃಖಕ್ಕೆ ಅಳುವವರ ಮೆಚ್ಚ
ನಮ್ಮ ಕೂಡಲ ಸಂಗಮದೇವ,

ಎಂದು ಅಂತಃಶುದ್ಧಿಯ ಪರೀಕ್ಷೆಯನ್ನೇ ಒಡ್ಡಿದರು. ಪರೀಕ್ಷಿಸಲು ಬಂದವರನ್ನೂ ಪರೀಕ್ಷಿಸಿಕೊಳ್ಳುವಂತೆ ಮಾಡಿದರು. ಇಂತು ಜನತೆಯಲ್ಲಿ ಪ್ರಾಮಾಣಿಕ ಸಹಜೀವನ, ಸಹಬಾಳ್ವೆಗಾಗಿ ಶ್ರಮಿಸಿದರು.

"ಕಾಗೆಯೊಂದು ಅಗುಳ ಕಂಡರೆ ಕರೆಯದೆ ತನ್ನ ಬಳಗವೆಲ್ಲವನು ?
ಕೋಳಿಯೊಂದು ಗುಟುಕ ಕಂಡರೆ ಕರೆಯದೆ ತನ್ನ ಕುಲವೆಲ್ಲವನು ?
ಶಿವಭಕ್ತನಾಗಿ ಭಕ್ತಿ ಪಕ್ಷವಿಲ್ಲದಿದ್ದರೆ ಕಾಗೆ
ಕೋಳಿಯಿಂದ ಕರ ಕಷ್ಟ ಕೂಡಲ ಸಂಗಮ
ದೇವಾ"

ಎಂದು ಪ್ರಕೃತಿಯಲ್ಲಿನ ಸಹಜೀವನವನ್ನು ತೋರಿಸಿಕೊಡುತ್ತಾ ಇಂತಹ ಆರ್ಥಿಕ ಕ್ಲಿಷ್ಟ ಪರಿಸ್ಥಿತಿಯಲ್ಲಿ ಹಂಚಿ ತಿನ್ನಬೇಕು, ಶ್ರಮ, ದಾರಿದ್ರ್ಯಗಳನ್ನು ಉಪಯೋಗಿಸಿಕೊಂಡು ಶೋಷಣಾಪ್ರವೃತ್ತಿಯನ್ನು ತ್ಯಜಿಸಬೇಕೆಂದು ತಿಳಿಸಿದರು.

**ಕಾಯಕ ಕ್ರಾಂತಿ:**

ಮಾನವತಾವಾದದ ಅಗ್ರಗಣ್ಯ ಮಹನೀಯರಾದ ಬಸವಣ್ಣನವರು ಇಂದಿನ ಸಮಾಜವಾದದ ಪ್ರತಿರೂಪ. ಇಂತಹ ಮಹಾನುಭಾವರು ದೇವರು ಧರ್ಮದ ಬಗೆಗೂ ಅಷ್ಟೇ ಕಟುಸತ್ಯವಾದಿಗಳು, ನ್ಯಾಯದುರಂಧರರೂ ಆಗಿದ್ದರು. ಅಲ್ಲಿಯೂ ಅಂತರಂಗ ಬಹಿರಂಗ ಶುದ್ಧಿ, ಚಾರಿತ್ರ್ಯ, ಕಾಯಕ ಭಕ್ತಿ, ಜ್ಞಾನಕ್ಕೆ ಮಾನ್ಯತೆ ಕೊಟ್ಟಿದ್ದರು. "ಕಾಯಕವೇ ಕೈಲಾಸ" ವೆಂದು, ದೇವರು ಧರ್ಮದ ಹೆಸರಿನಲ್ಲಿ ಸೋಮಾರಿಗಳಾಗುವುದು ತಪ್ಪೆಂದು ಸಾರಿ ಕರ್ಮಯೋಗಕ್ಕೆ ಪ್ರಾಶಸ್ತ್ಯ ನೀಡಿದರು. ಪ್ರತಿಯೊಬ್ಬನೂ ತನ್ನ ಅನ್ನವನ್ನು ತಾನು ದುಡಿಯಬೇಕು. "ತನ್ನಾಶ್ರಯದ ರತಿಸುಖವನು, ತಾನುಂಬ ಊಟವನು ಬೇರೆ ಮತ್ತೊಬ್ಬರ ಕೈಯಲ್ಲಿ ಮಾಡಿಸಬಹುದೆ ?' ಗುರುವಾದರೂ ಕಾಯಕದಿಂದಲೇ ಜೀವನ್ಮುಕ್ತ, ಲಿಂಗವಾದರೂ ಕಾಯಕದಿಂದಲೇ, ಕಾಯಕದಿಂದಲೇ ಶಿಲೆಯ ಕುಲಹರಿವುದು ..........' ಎಂದು ಜನರಲ್ಲಿ ಧಾರ್ಮಿಕ ಭಾವನೆಯ ಕಾಯಕ ಕ್ರಾಂತಿಯನ್ನೇ ಉಂಟುಮಾಡಿದರು.

"ಸತ್ಯ ಶುದ್ಧ ಕಾಯಕವೆ ಕೈಲಾಸ. ಕಾಯಕದಲ್ಲಿ ಕುಲ ಭೇದವಿಲ್ಲ, ಮೇಲು ಕೀಳುಗಳಿಲ್ಲ. ಕಾಯಕದಿಂದ ಬಂದುದಲ್ಲದೆ ಲಿಂಗಾರ್ಪಿತವಾಗಲಾರದು, ಗುರುವಾಗಲಿ, ಜಂಗಮನಾಗಲಿ, ಭಕ್ತನಾಗಲಿ ಕಾಯಕ ಮಾಡಿ ದಾಸೋಹ ನಡೆಸಬೇಕು. ಅಂದಿನದು ಅಂದೇ ಜಂಗಮಾರ್ಪಿತವಾಗಬೇಕು. ಉಳಿಕೆ ಕಿಲ್ಬಿಷ ಎಂಬ ಸಾಮಾಜಿಕ ಮೌಲ್ಯ, ಧಾರ್ಮಿಕ ಭಾವನೆಯೊಡನೆ ಒಗ್ಗೂಡಿ, ಸಮಾಜವಾದಕ್ಕೆ ಮೂಲ ಭೂತ ಸ್ಥಿತತ್ವವಾಗಿದೆ.

ದೇವರು, ಧರ್ಮದ ಹೆಸರಿನಲ್ಲಿ ಪ್ರಾಣಿಬಲಿ ಡಂಭಾಚಾರ, ಅಂಧಶ್ರದ್ಧೆ, ಅವರು 'ಏಕಂ ಸತ್ ವಿಪ್ರಾಬಹುಧಾವದಂತಿ' ಯಲ್ಲಿ ನಂಬಿಕೆಯುಳ್ಳವರು. ಅಂತೆಯೇ "ದೇವನೊಬ್ಬ ನಾಮ ಹಲವು" ಎಂದು ಏಕ ದೇವತಾವಾದವನ್ನು ಪುರಸ್ಕರಿಸಿದರು.

"ಮಡಕೆ ದೈವ ಮೊರ ದೈವ
ಬೀದಿಯ ಕಲ್ಲು ದೈವ
ಹಣಿಗೆ ದೈವ ದೈವವೆಂದು ಕಾಲಿಡಲಿಂಬಿಲ್ಲ" ಎಂದು ಬಹುದೇವತಾ ಉಪಾಸನೆ, ದೈವದ ಹೆಸರಿನಲ್ಲಿ ಕಚ್ಚಾಡುವುದು, ತಾಮಸರೂಪದಲ್ಲಿ ಪೂಜೆ ಮಾಡುವುದು ಅವರಿಗೆ ಸೇರದ ವಿಚಾರವಾಗಿದ್ದಿತು.

ಕಲ್ಲು ದೇವರು ದೇವರಲ್ಲ.
ಮಣ್ಣು ದೇವರು ದೇವರಲ್ಲ.
ಅಷ್ಟಷಷ್ಟಿ ಕೋಟಿ ತೀರ್ಥಕ್ಷೇತ್ರಗಳಲ್ಲಿ ದೇವರಿಲ್ಲ. ತನ್ನ ತಾನರಿದು ತಾನಾರೆಂದು ತಿಳಿದೊಡೆ ತಾನೇ ದೈವ" ವೆಂದು ಮಾನವರಿಗೆ "ಅಹಂ ಬ್ರಹ್ಮಾಸ್ಮಿ" ಯ

ಸರಳ ರೂಪವನ್ನು ತೋರಿದವರು. ಡಾಂಭಿಕತೆ, ಬಹುದೇವತಾ ಉಪಾಸನೆ ಅವರಿಗೆ ಒಗ್ಗದ ವಿಚಾರವಾಗಿದ್ದಿತು. ಯಜ್ಞ ಯಾಗಾದಿಗಳನ್ನು ನಡೆಸುತ್ತಾ ಪ್ರಾಣಿ ಬಲಿಗೆ, ವಾಮಾಚಾರ ಪೂಜೆಗೆ ಕೊಡುತ್ತಿದ್ದ ಪ್ರಾಶಸ್ತ್ಯವನ್ನು ಕಂಡು, ಅಹಿಂಸಾತತ್ವವನ್ನು ಬುದ್ಧ ಮಹಾವೀರರ ನಂತರ ಮತ್ತೆ ಬೋಧಿಸಿದರು--

" ದಯವಿಲ್ಲದ ಧರ್ಮವು ಯಾವುದಯ್ಯಾ
ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿ
ದಯವೇ ಧರ್ಮದ ಮೂಲವಯ್ಯ
ಕೂಡಲ ಸಂಗಯ್ಯ ನಂತಲ್ಲದೊಲ್ಲನಯ್ಯ

ಎಂದು ಸಾರಿದರು.

**ನೇಮ ನಿಷ್ಠೆ :**

ದೇವರು, ಧರ್ಮದ ಹೆಸರಿನಲ್ಲಿ, ಜಪ, ತಪ ವ್ರತ ಹೋಮಗಳಿಗೆ ಪ್ರಾಶ್ಯಸ್ತ್ಯನೀಡಿ, ನಿಜಭಕ್ತಿಯನ್ನು ಮರೆತು, ಅಸಮಾನತೆ, ಪ್ರತ್ಯೇಕತೆ, ಜಾತೀಯತೆ, ಭೇದಭಾವಗಳನ್ನು ಬಿತ್ತುವ ಆಚರಣೆ ಅವರಿಗೆ ಹಿಡಿಸದು 'ಸರ್ವೇಜನಾಃ ಸುಖಿನೋಭವಂತು' ಎಂಬುದು ಅವರ ಧ್ಯೇಯ.

" ಬಂದುದ ಕೈಕೊಳ್ಳಬಲ್ಲರೆ ನೇಮ
ಇದ್ದುದ ವಂಚನೆ ಮಾಡದಿದ್ದರೆ ಅದು ನೇಮ
ನಡೆದು ತಪ್ಪದಿದ್ದರೆ ನೇಮ; ನುಡಿದು ಹುಸಿಯ-
ದಿದ್ದರೆ ನೇಮ
ನಮ್ಮ ಕೂಡಲ ಸಂಗನ ಶರಣರು ಬಂದರೆ
ಒಡೆಯರಿಗೊಡನೆಯನೊಪ್ಪಿಸುವುದೇ ನೇಮ "

" ಬೇಡುವವರ ನೋಡಿ ನೋಡಿ ಈಯಲಿಲ್ಲದವನ ಜೀವನವದೇತಕೋ " ? ಎಂಬಲ್ಲಿ ಹಂಚಿ ಉಣ್ಣುವ ನೇಮ ಅವರು ಪಾಲಿಸಿದರು. ಹೋಮ ನೇಮವನ್ನು ಖಂಡಿಸುತ್ತಾ— " ಹೋಮದ ನೇಮದಲ್ಲಿ ಹೋತನ ತಿಂಬ ಅನಾಮಿಕರೊಡಸಾಡಿ ಗೆಲುವುದೇನು ? " ಎಂದು ಪ್ರಾಣಿ ಹಿಂಸೆಯನ್ನು ಅಲ್ಲಗಳೆದಿದ್ದಾರೆ ಸತ್ಯನಲ್ಲದವಂಗೆ ನಿತ್ಯನೇಮವೇಕೆ ? ಎಂಬಲ್ಲಿ 'ಸತ್ಯವೇ ದೇವರು' ಎಂಬ ತತ್ವವನ್ನು ಸಾರಿದ್ದಾರೆ.

ಇಪ್ಪತ್ತುನಾಲ್ಕು ತಿಥಿಯಿಂದ ವೆಗ್ಗಳ
ಗ್ರಹಣ ಸಂಕ್ರಾಂತಿಯಿಂದ ವೆಗ್ಗಳ
ಏಕಾದಶಿ-ವ್ಯತೀಪಾತದಿಂದ ವೆಗ್ಗಳ
ಸೂಕ್ಷ್ಮ ಶಿವಪಥವರಿದವರಿಗೆ
ಹೋಮ-ನೇಮ-ಜಪ-ತಪದಿಂದ ವೆಗ್ಗಳ
ಕೂಡಲ ಸಂಗಮದೇವಾ ನಿಮ್ಮ ಮಾಣದೆ
ನೆನವಂಗೆ "

ಎಂದು ಯಾವ ಐಹಿಕ ನೇಮಗಳೂ ಶಿವನಿಗೆ ಸಲ್ಲ. ಸದ್‌ಭಕ್ತಿ, ಶುದ್ಧಚಾರಿತ್ರ್ಯದಿಂದ ಆತನನ್ನು ನೆನೆಯುವುದೇ ನೇಮವೆಂದು ತಿಳಿಸಿದರು. ದೇವನೊಲಿಸುವ ಷಟ್‌ಸೂತ್ರವನ್ನು ಹೇಳುತ್ತಾ ಶೀಲ ಚಾರಿತ್ರ್ಯಕ್ಕೆ ಪ್ರಾಮುಖ್ಯತೆಯನ್ನು ಕೊಟ್ಟರು.

ಭಕ್ತನೆಂತೆಂಬೆನಯ್ಯಾ ಭವಸಂಗ ಬಿಡದನ್ನಕ್ಕ
ಮಾಹೇಶ್ವರನೆಂತೆಂಬೆನಯ್ಯಾ ಪರ ಸ್ತ್ರೀ
ಪರರರ್ಥದಾಸೆ ಬಿಡದನ್ನಕ್ಕ ?
ಪ್ರಸಾದಿ ಎಂತೆಂಬೆನಯ್ಯಾ ಅಧಿ ವ್ಯಾಧಿ
ನಷ್ಟವಾಗದನ್ನಕ್ಕ ?
ಪ್ರಾಣಲಿಂಗಿ ಎಂತೆಂಬೆನಯ್ಯಾ ಪ್ರಾಣ
ಸ್ವಸ್ಥಿರವಾಗದನ್ನಕ್ಕ ?
ಶರಣನೆಂತೆಂಬೆನಯ್ಯಾ ಪಂಚೇಂದ್ರಿಯ
ನಾಸ್ತಿಯಾಗದನ್ನಕ್ಕ ?
ಐಕ್ಯನೆಂತೆಂಬೆನಯ್ಯಾ ಜನನ ಮರಣ
ವಿರಹಿತನಾಗದನ್ನಕ್ಕ ?
ಇಂತಪ್ಪ ಭಾಷೆ ವ್ರತ ನೇಮಂಗಳ
ನಾನರಿಯೆನಯ್ಯಾ

ಎನ್ನುತ್ತಾ ಇಂತಹ ವ್ರತ, ನೇಮಗಳಿಗಿಂತ ಭಕ್ತನೇಮ, ದಾಸೋಹದ ನೇಮ, ಸಚ್ಚಾರಿತ್ರ್ಯದ ನೇಮದ ಮಾರ್ಗವನ್ನು ಹಿಡಿದು ನಡೆದರು,–ನಡೆಸಿದರು. ಸತ್ಯಶುದ್ಧವಿದ್ದವರಿಗೆ ಯಾವ ವ್ರತ ನೇಮ ಹವನ ಹೋಮಗಳು ಬೇಡ ಎಂಬುದೇ ಅವರ ಉಪದೇಶ ಆದೇಶ. ಅಂತರಂಗ, ಬಹಿರಂಗ ಶುದ್ಧಿಯ ಕಾಯಕವನ್ನು ಅವರು ಬೋಧಿಸಿದರು. ತ್ರಿಕರಣ ಶುದ್ಧಿಯನ್ನು ಅವರ ನಾನಾ ವಚನಗಳಲ್ಲಿ ಕಾಣಬಹುದಾಗಿದೆ

ಬಾಹ್ಯವೇಷಕ್ಕೆ ಮಾರುಹೋದವರನ್ನು ಕುರಿತು "ಲಾಂಛನಕ್ಕೆ ತಕ್ಕ ಆಚರಣೆಯಿಲ್ಲದಿದ್ದರೆ ಕೂಡಲ ಸಂಗಮದೇವಾ, ನೀ ಸಾಕ್ಷಿಯಾಗಿವಿ ಎಂಬೆ!" "ನುಡಿಯಲ್ಲಿ ಎಚ್ಚೆತ್ತು, ನಡೆಯಲ್ಲಿ ತಪ್ಪಿದರೆ ಹಿಡಿದಿರ್ದ ಲಿಂಗವೂ ಘಟಸರ್ಪವಂತೆ", ಲಿಂಗ ಲಾಂಛನ ದಾರಿಯಾದಲ್ಲಿ ಫಲವೇನು ಲಿಂಗ ಪಥವ ತಪ್ಪಿನಡೆವರು," ಅಂತರಂಗದಲ್ಲಿ ಅರಿವಾದಡೇನಯ್ಯ ಬಹಿರಂಗ ಕ್ರಿಯೆಯಿಲ್ಲದನ್ನಕ್ಕರ? "ಈ ಭಾಂಡ ಭಾಜನ ಶುದ್ಧಿ ಇಲ್ಲದವರ ಭಕ್ತಿ ಹೆಂಡದ ಮಡಕೆಯ ಹೊರಗೆ ತೊಳೆದಂತೆ" ಎಂದು ಮಡಿವಂತ ಲಿಂಗವಂತರನ್ನೇ ಕಟುವಾಗಿ ಟೀಕಿಸಿದರು. ಅಂತರಂಗ ನೈರ್ಮಲ್ಯವಿಲ್ಲದವರನ್ನು ಕುರಿತು "ತನು ಮುಟ್ಟಿ, ಮನ ಮುಟ್ಟದೆ ದೂರವಾದರಯ್ಯ ಬೆಲೆವೆಣ್ಣಿನಂತೆ" ಎಂದು ನುಡಿದು, ಅರಿವು, ಕ್ರಿಯೆಗಳಲ್ಲಿ ಸಾಮರಸ್ಯವೇರ್ಪಡಬೇಕೆಂದರು.

ಪಾಪಕ್ಕೆ ಪ್ರಾಯಶ್ಚಿತ್ತವೆಂದು ಹಣ, ವಸ್ತುಗಳನ್ನು ಪಡೆಯುವುದು ಅವರಿಗೆ ಒಗ್ಗದ ವಿಚಾರ. ಅಂದು ನಡೆಯುತ್ತಿದ್ದ ಈ ವಿಧವಾದ ಸ್ವಾರ್ಥ ಸಾಧನೆಯನ್ನು ಅವರು ಮೆಚ್ಚದೆ, ಅವರ ತನುಮನಗಳ ಶುದ್ಧಿಯಿಂದ ಆತನ ಪಾಪ ವಿಮೋಚನೆಯಾಗವುದು ಎಂದು ನುಡಿದರು. ಅವರು ಅಂತಹವರ ಉದ್ಧಾರಕ್ಕೆ ಕಂಕಣ ಬದ್ಧರಾದರೇ ವಿನಹ ಅಂದಿನ ಧರ್ಮೋಪದೇಶಕರು, ಪುರೋಹಿತರಂತೆ, ಅವರ ಪಾಪಪ್ರಜ್ಞೆಯನ್ನು ಸ್ವಾರ್ಥಕ್ಕೆ ಬಳಸಿಕೊಳ್ಳಲಿಲ್ಲ.

> "ಎಲವೋ ಎಲವೋ ಪಾಪಕರ್ಮವ ಮಾಡಿದವನೇ
> ಎಲವೋ ಎಲವೋ ಬ್ರಹ್ಮಹತ್ಯವ ಮಾಡಿದವನೇ
> ಒಮ್ಮೆ ಶರಣೆನ್ನಲವೋ
> ಒಮ್ಮೆ ಶರಣೆಂದರೆ ಪಾಪ ಕರ್ಮ ಓಡುವುದು"

ಎಂದು ಭಕ್ತಿ ಮಾರ್ಗವನ್ನು ಆತನಿಗೆ ತಿಳಿಸಿ ಮಂಗಳದ ಮುಂಬೆಳಕನ್ನು ತೋರಿದರು.

ವಿಶ್ವಧರ್ಮವನ್ನು ಬೋಧಿಸಿದ ಬಸವಣ್ಣನವರಾದರೋ ಭಕ್ತಿ ಭಂಡಾರಿ। 'ಭಕ್ತಪ್ರಿಯಶಿವನ' ರೂಪವೇ ಅವರಿಗೆ ಎಲ್ಲೆಲ್ಲೂ ಕಾಣಬಹುದು ಎಂತಲೇ

> "ಎತ್ತೆತ್ತ ನೋಡಿದಡತ್ತತ್ತ ನೀನೇ ದೇವಾ; ಸಕಲ ವಿಸ್ತಾರದ ರೂಹು ನೀನೇ ದೇವಾ; ವಿಶ್ವತೋಚಕ್ಷು ನೀನೇದೇವ; ವಿಶ್ವತೋಮುಖ ನೀನೇ ದೇವಾ; ವಿಶ್ವತೋಬಾಹು ನೀನೇ ದೇವಾ; ವಿಶ್ವತೋ ಪಾದ ನೀನೇ ದೇವಾ, ಕೂಡಲ ಸಂಗಮದೇವಾ"

ಎಂದು ಸೃಷ್ಟಿಯೇ ದೈವವಾಗಿ ಅವರಿಗೆ ಗೋಚರಿಸಿತು. ಇಂತಹ ದೇವನನ್ನು "ಎನಗೆ ಕೂಡಲ ಸಂಗಮದೇವರ ನೆನೆವುದೇ ಚಿಂತೆ" ಎಂದರು.

> "ವಚನದಲ್ಲಿ ನಾಮಾಮೃತ ತುಂಬಿ, ಮನದಲ್ಲಿ ನಿಮ್ಮ ನೆನಹು ತುಂಬಿ, ನಯನದಲಿ ಮೂರುತಿ ತುಂಬಿ, ಕಿವಿಯಲ್ಲಿ ಕೀರುತಿ ತುಂಬಿ, ಕೂಡಲ ಸಂಗಮದೇವಾ ನಿಮ್ಮ ಚರಣಕಮಲದ ಲಾನವಾ ತುಂಬಿ!"

ಎಂದು ಸಕಲ ಇಂದ್ರಿಯಗಳನ್ನೂ ಆತನಲ್ಲೇ ಲೀನಗೊಳಿಸಿದ ಇಂತಹ ದೇವನಿಗೆ, ಸತ್ ಚಾರಿತ್ರ್ಯ, ಸಹಬಾಳ್ವೆ, ಕಾಯಕ ಮುಂತಾದುವುಗಳನ್ನೇ ಪೂಜಾ ಸಾಮಗ್ರಿಯವನ್ನಾಗಿ ಮಾಡಿಕೊಂಡರು. ಏಕದೇವಕಾವಾದ, ದಯೆ, ನಿಷ್ಕಪಟಗಳೇ ಭಕ್ತಿಯ ರೂಪವಾಗಿದ್ದವು. ದೇವ, ದೈವಗಳ ಹೆಸರಿನಲ್ಲಿ ವಿಗ್ರಹಾರಾಧನೆಯನ್ನು ಮಾಡುತ್ತಾ ಭಕ್ಷ್ಯ ಭೋಜ್ಯಾದಿಗಳನ್ನು ಸಮರ್ಪಿಸಿ, ಮೆರವಣಿಗೆ, ಆಡಂಬರಗಳಲ್ಲಿ ಲೀನವಾಗುವುದು ಬಸವಣ್ಣನವರಿಗೆ ಒಲ್ಲದ ವಿಚಾರ. ಹಸಿದು ಹಂಬಲಿಸುತ್ತಿರುವ ಜನತೆಗೆ ಅನ್ನವಿತ್ತಡೆ ಅದೇ ದೇವನೊಲಿಸುವ ಪರಿಯೆಂದು ಸಾರಿ ಅನ್ನವಿತ್ತು ಸಲಹಿದರು. ಮೊದಲು ಲೋಕದ ಕಷ್ಟ ನಿವಾರಣೆ ನಂತರ ದೇವರೋಪಾಸನೆ ಅವರ ಗುರಿಯಾಗಿದ್ದಿತು. ಅಂತೆಯೇ "ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ" ಎಂದರು ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ ಎಂಬ ದಾಸೋಹಂಭಾವ ಅವರದ್ದಾಗಿತ್ತು. ಎಂತಲೇ ಎನ್ನ ಕಾಲೇ ಕಂಭ, ದೇಹವೇ ದೇಗುಲ, ಶಿರವೇ ಹೊನ್ನ ಕಳಸವಯ್ಯ ಎಂದು ದೇಹವನ್ನೇ ದೇಗುಲವನ್ನಾಗಿ ಮಾಡಿಕೊಂಡರು. ಅವರ ಭಕ್ತಿಯ ನಿಷ್ಠೆ

[ 25 ನೇ ಪುಟ ನೋಡಿ ]

ಬಾಳಿಗೊಂದು

# ಹವ್ಯಾಸ

— ನಾ. ಡಿಸೋಜ.

ಹವ್ಯಾಸ ಹವ್ಯಾಸವೇ. ಹವ್ಯಾಸದಿಂದ ಹೊಟ್ಟೆ ತುಂಬಿಸಿಕೊಳ್ಳುವುದಾಗಲಿ, ಹೆಂಡತಿ ಮಕ್ಕಳನ್ನು ಸಾಕುವುದಾಗಲಿ ಆಗದಮಾತು. ಹವ್ಯಾಸ ಒಂದು ವೃತ್ತಿಯೂ ಅಲ್ಲ. ಒಂದು ಉದ್ಯೋಗವೂ ಅಲ್ಲ. ಆದರೂ ಪ್ರತಿಯೊಬ್ಬರಿಗೂ ಒಂದು ಹವ್ಯಾಸ ಇರಬೇಕು. ಹೀಗೆ ಬಾಳಿಗೊಂದು ಹವ್ಯಾಸವಿದ್ದರೆ ಆಗುವ ಅನುಕೂಲಗಳು ಹಲವು.

ಬಾಳೊಂದು ರಂಗಮಂದಿರ. ಜನರೆಲ್ಲ ನಟರು ಅನ್ನುವ ಮಾತಿದೆ. ಹಾಗೆಯೇ ರಂಗಮಂಟಪದಲ್ಲಿ ನಾಟಕವಾಡಿ ಸುಸ್ತಾದರೆ ಸುಧಾರಿಸಿಕೊಳ್ಳಲು Side wing ಗಳು ಬೇಕು ಎಂಬ ಹೇಳಿಕೆಯೂ ಇದೆ. ಹವ್ಯಾಸಗಳನ್ನೇ Sidewing ಗಳೆಂದು ಕರೆಯಬಹುದೇನೋ. ಅಮೇರಿಕದ ಅಧ್ಯಕ್ಷ ಐಸೆನ್‌ಹಾವರ್ ಅವರು ರಾಜಕೀಯಕ್ಕೆ ಸಂಬಂಧಪಟ್ಟ ಸಮಸ್ಯೆಗಳನ್ನು ಬಿಡಿಸಿ ಬಿಡಿಸಿ ತಲೆಚಿಟ್ಟು ಹಿಡಿದಾಗ ಒಂದರ್ಭಗಂಟಿ ಚಿತ್ರ ಬಿಡಿಸುತ್ತಿದ್ದರಂತೆ ಅವರ ಕೋಣೆಯಲ್ಲಿ. ಮೂರು ಕಾಲಿನ ಮೇಲೆ ನಿಂತ ಕ್ಯಾನವಾಸು, ಬಣ್ಣ, ಕುಂಚ ಯಾವಾಗಲೂ ಸಿದ್ಧವಾಗಿರುತ್ತಿತ್ತಂತೆ. ಐಸೆನ್‌ಹಾವರ್ ವಿಶ್ವವಿಖ್ಯಾತ ಚಿತ್ರಗಾರರೇನೂ ಆಗಿರಲಿಲ್ಲ. ಹಾಗೆ ಚಿತ್ರಗಾರರಾಗುವ ಹಂಬಲವೂ ಅವರಿಗೆ ಇದ್ದಿರಲಾರದು. ಆದರೆ ವಿಶ್ವವಿಖ್ಯಾತ ರಾಜಕಾರಣಿಗಳಾಗಿದ್ದ ಅವರು ಚಿತ್ರಬರೆಯುವುದನ್ನು ಒಂದು ಹವ್ಯಾಸವನ್ನಾಗಿ ಮಾಡಿಕೊಂಡಿದ್ದರಷ್ಟೆ.

ಇಲ್ಲಿ ಗಮನಿಸಬೇಕಾದ ಮತ್ತೊಂದು ವಿಷಯವಿದೆ. ಮಾಡುವ ಕೆಲಸವನ್ನು ನಿಲ್ಲಿಸಿ ಇನ್ನೊಂದರಲ್ಲಿ ತೊಡಗುವುದರಿಂದಲೇ ಒಂದು ಬಗೆಯ ವಿಶ್ರಾಂತಿ ದೊರೆಯುತ್ತದಂತೆ. ಈ ಬಗೆಯ ಒಂದು ವಿಶ್ರಾಂತಿ ನಮಗೆ ಸಿಗಬೇಕೆಂದಿದ್ದರೆ ಯಾವುದಾದರೊಂದು ಹವ್ಯಾಸವನ್ನು ನಾವು ಅಂಟಿಸಿಕೊಳ್ಳಲೇ ಬೇಕು.

ಈಗ ಹವ್ಯಾಸವೆಂದರೇನು ಎಂಬ ಪ್ರಶ್ನೆ ಸಹಜವಾಗಿ ಏಳುತ್ತದೆ. ಸಿಗರೇಟು ಸೇದುವುದು, ನಶ್ಯ ಹಾಕಿಕೊಳ್ಳುವುದು, ಇಸ್ಪೀಟು ಆಡುವುದು, ಸಿನೆಮಾ ನೋಡಲೇ ಬೇಕೆನ್ನುವುದು ಚಟವಾದೀತು. ಹವ್ಯಾಸವಾಗಲಾರದು. ಅರ್ಥಕೋಶದಲ್ಲಿ ಹವ್ಯಾಸ, ಚಟ ಎರಡೂ ಒಂದೇ ಎಂಬ ಅರ್ಥವಿದೆಯಾದರೂ ಎರಡೂ ಬೇರೆ ಬೇರೆ ಎಂದೇ ನಾವು ತೆಗೆದುಕೊಳ್ಳುವುದು ಒಳ್ಳೆಯದು. ಇಂಗ್ಲೀಷಿನ Hobby ಎನ್ನುವ ಪದಕ್ಕೆ ಕನ್ನಡದಲ್ಲಿ ಹವ್ಯಾಸ ಎಂಬುದಾಗಿ ಅನುವಾದ ಮಾಡಲಾಗಿದ್ದು, ಮೈಸೂರು ವಿಶ್ವವಿದ್ಯಾನಿಲಯದ ಇಂಗ್ಲೀಷ್ ಕನ್ನಡ ನಿಘಂಟು Hobby ಎನ್ನುವ ಪದಕ್ಕೆ "ಜೀವನೋಪಾಯಕ್ಕಲ್ಲದೆ ಆತ್ಮ ಸಂತೋಷಕ್ಕಾಗಿ ಮಾಡುವ ಕೆಲಸ ಅಥವಾ ವ್ಯಾಸಂಗ" ಎಂದೇ ಅರ್ಥ ನೀಡುತ್ತದೆ. ಇಲ್ಲಿ ಆತ್ಮ ಸಂತೋಷ ಎಂಬ ಪದದ ಮೇಲೆ ಒತ್ತುಹಾಕಿ ನೋಡಬೇಕಷ್ಟೆ.

ನಮ್ಮದು ಏಕಮುಖ ಜೀವನ. ಜಟಕಾ ಗಾಡಿಯ ಕುದುರೆಯಂತೆ ಅತ್ತಿತ್ತ ನೋಡುವ ವ್ಯವಧಾನ ಇಲ್ಲದ ಬದುಕು ನಮ್ಮದು, ಮೊದಲೇ ಹಾಸಿದ ಹಳಿಗಳ ಮೇಲೆ ವೇಗವಾಗಿ ನುಗ್ಗುವ, ಹಳಿಗಳು ತಿರುಗಿದೆಡೆಯಲ್ಲಿ ತಿರುಗುವ ರೈಲಿನಂತೆ ನಮ್ಮ ಜೀವನ. ನಮ್ಮಲ್ಲಿ ಯಾರನ್ನೇ ತೆಗೆದುಕೊಳ್ಳೋಣ ಅವನ ವೃತ್ತಿಯಲ್ಲಿ ಮಾತ್ರವೇ ಅವನಿಗೆ ಆಸಕ್ತಿ. ವ್ಯಾಪಾರಿಗೆ ಹಗಲು ರಾತ್ರಿ ವ್ಯಾಪಾರದ ಚಿಂತೆ. ವೈದ್ಯನಿಗೆ

ಯಾವಾಗಲೂ ಗುಳಿಗೆ ಸಿರಿಂಜು ಸ್ಟೆತಸ್ಕೋಪಿನದೇ ಧ್ಯಾನ, ಉಪಾಧ್ಯಾಯರಿಗೆ ಅವರ Subject ಬಗ್ಗೆ ಮಾತ್ರ ಕಾಳಜಿ, ವಕೀಲರ ಪಾಡೂ ಇದೆ. ಇಂಜಿನಿಯರುಗಳ ಕತೆಯೂ ಇದೆ. ರೈತ, ಕಾರ್ಮಿಕ, ಗುಮಾಸ್ತ, ಕಂತ್ರಾಟುದಾರ; ಉಪಾಧ್ಯಾಯ, ಗೌಳಿ, ವಾಹನ ಚಾಲಕ, ನರ್ಸ್, ಕಾಂಪೌಂಡರ, ಎಲ್ಲರದೂ ಇದೇ ಕತೆ.

ಮಾತಿನ ನಡುವೆ ಈ ಎಲ್ಲ ಜನ
"ಅಯ್ಯೋ ನಮ್ಮ ಕೆಲಸ ನೋಡಿಕೊಂಡರೆ ಸಾಕು, ಬೇರೆ ಕಡೆ ಗಮನ ಹರಿಸಲಿಕ್ಕೂ ನಮಗೆ ಬಿಡುವಿರುವುದಿಲ್ಲ."

ಅನ್ನುವ ಆತ್ಮವಂಚನೆಯ ಮಾತನ್ನು ಆಗಾಗ್ಗೆ ಹೇಳುವುದುಂಟು, ಇದು ಹಾರಿಕೆಯ ಮಾತಲ್ಲದೆ ಇದರಲ್ಲಿ ವಾಸ್ತವಾಂಶ ಕಡಿಮೆ. ಯಾವುದೇ ಹವ್ಯಾಸ ದಿನದ ಇಪ್ಪತ್ನಾಲ್ಕು ತಾಸುಗಳನ್ನು ತಿನ್ನುವುದಿಲ್ಲ ತಮ್ಮ ಹವ್ಯಾಸದ ಉಪಯೋಗ ಅರಿಯದ ಜನ ಅಯ್ಯೋ ಬೇರೆ ಯಾವುದಕ್ಕೂ ಬಿಡುವಿಲ್ಲ ಎಂದು ಹೇಳಬಹುದಷ್ಟೆ.

ಆತ್ಮ ಸಂತೋಷಕ್ಕಾಗಿ ಚಿತ್ರಬರೆಯುವುದು, ಪಿಟೀಲು ನುಡಿಸುವುದು, ಕೊಳಲು ಬಾರಿಸುವುದು. ಕತೆ ಬರೆಯುವುದು ತೋಟಮಾಡುವುದು, ಈಜುವುದು, ಪ್ರವಾಸ ಹೋಗುವುದು, ಹಳೇನಾಣ್ಯಗಳನ್ನೋ, ಅಂಚೆ ಚೀಟಿಗಳನ್ನೋ (ಹಣಕೊಟ್ಟು ಕೊಂಡು) ಸಂಗ್ರಹಿಸುವುದು, ಇವೆಲ್ಲಾ ಹವ್ಯಾಸಗಳೇ. ಕೈಯಿಂದ ಅಲ್ಪಸಲ್ಪ ಹಣ ಖರ್ಚಾಗಬಹುದು, ದಿನದ ಒಂದರ್ಧಗಂಟೆಯನ್ನು ಇದಕ್ಕಾಗಿ ಮೀಸಲಾಗಿಡಬಹುದು, ಆದರೆ ಈ ಹವ್ಯಾಸಗಳಿಂದ ದೊರಕುವ ಸಂತೋಷಕ್ಕೆ ಸರಿಸಾಟಿಯಾದುದು ಬೇರೇನೂ ಸಿಗಲಾರದು.

ಕಾನೂನಿನ ಪುಸ್ತಕಗಳನ್ನೋದಿ ಬೇಸತ್ತಾಗ ಯಾವನೇ ವಕೀಲ ಒಂದು ಅರ್ಧಗಂಟೆ ವೀಣೆ ನುಡಿಸುತ್ತಾ ಕುಳಿತಿದ್ದನೆನ್ನಿ, ಇಲ್ಲವೆ ಗಿರಾಕಿಗಳೊಡನೆ ಕಾದಾಡಿಬಂದ ಓರ್ವ ವ್ಯಾಪಾರಿ ರಾತ್ರಿ ಮಲಗುವ ಮುನ್ನ ಒಂದು ಪುಸ್ತಕ ಓದಿದನೆನ್ನಿ, ಓರ್ವ ಇಂಜಿನಿಯರ್ ಮನೆಯಲ್ಲಿ ನಾಲ್ಕು ಗಿಣಿಗಳನ್ನು ಸಾಕಿದ್ದನೆನ್ನಿ, ಓರ್ವ ವೈದ್ಯನಿಗೆ ಬೇರೊಂದು ಹವ್ಯಾಸ ಇತ್ತೆನ್ನಿ, ಆಗ ಇವರೆಲ್ಲರಿಗೂ ದೈಹಿಕವಾಗಿ ಮಾನಸಿಕವಾಗಿ ಆಗುವ ಲಾಭ ಹೆಚ್ಚು. ಈ ಹವ್ಯಾಸಗಳಿಂದಾಗಿ ಅವರು ಜೀವನೋಪಾಯಕ್ಕಾಗಿ ಅವಲಂಬಿಸಿಕೊಂಡಿರುವ ವೃತ್ತಿಯನ್ನೂ ಕೂಡ ಸಮರ್ಥವಾದ ರೀತಿಯಲ್ಲಿ ಮಾಡಲು ತಕ್ಕ ಹುರುಪು ಹುಮ್ಮಸ್ಸು ಅವರಲ್ಲಿ ಕಾಣಿಸಿಕೊಳ್ಳುತ್ತದೆ. ಅನ್ನುವುದನ್ನು ಇಲ್ಲಿ ಮರೆಯಬಾರದು.

ಹವ್ಯಾಸದಿಂದ ಹಣ ಬರಲೂ ಬಹುದು. ಅದೂಕೂಡ ಸಂತಸದ ವಿಷಯವೆ. ಓರ್ವ ವೈಮಾನಿಕ ತನ್ನ ಆತ್ಮ ಚರಿತ್ರೆಯನ್ನು ಬರೆದರೆ (ಅದೂ ಇದೂ ಬರೆಯುವ ಹವ್ಯಾಸ ಈತನಿಗಿತ್ತು) ಓರ್ವ ವೈದ್ಯ ತನ್ನ ಅನುಭವವನ್ನು ಹೇಳಿಕೊಂಡರೆ, ಓರ್ವ ಇಂಜಿನಿಯರ್, ಓರ್ವ ಗುಮಾಸ್ತ, ವ್ಯಾಪಾರಿ, ಡ್ರೈವರ್ ಗೆಜ್ಜೆಕಟ್ಟಿಕುಣಿದರೆ, ವೇಷ ತೊಟ್ಟು ಅಭಿನಯಿಸಿದರೆ, ತಂಬೂರಿ ಹಿಡಿದು ಹಾಡಿದರೆ, ಕುಂಚ ಹಿಡಿದು ಚಿತ್ರಬರೆದರೆ ಅವನಿಗೆ ಕೀರ್ತಿ ಹಣ ಎರಡೂ ಬರಬಹುದು.

ಚಿಕ್ಕಂದಿನಲ್ಲೇ ಮಕ್ಕಳಿಗೆ ಕುಣಿಯಲು, ಹಾಡಲು ಬರೆಯಲು ಕಲಿಸಬೇಕು. ಅವರು ಯಾವುದಾದರೊಂದು ಹವ್ಯಾಸವನ್ನು ಬೆಳೆಸಿಕೊಳ್ಳುವಂತೆ ಹಿರಿಯರು ನೋಡಿಕೊಳ್ಳಬೇಕು. ಈ ಹವ್ಯಾಸ ಮುಂದೆ ಜೀವನದಲ್ಲಿ ಕೆಟ್ಟದಿನ ಬಂದಾಗ ದುಃಖದ ಸಮಯ ಬಂದಾಗ ಅವರನ್ನು ರಕ್ಷಿಸುತ್ತದೆ.

ಗಾಣಹೊತ್ತ ಎತ್ತಿನಂತೆ ಒಂದೇ ಜಾಡಿನಲ್ಲಿ ಸುತ್ತುವುದರಲ್ಲಿ ಹೆಚ್ಚಿನ ಸಂತೋಷವಿಲ್ಲ. ಹೊಟ್ಟೆಪಾಡಿಗಾಗಿ ಗಾಣದಜಾಡು ಇರಲಿ, ಜೊತೆಗೆ ಸಂತೋಷಕ್ಕಾಗಿ, ವಿಶ್ರಾಂತಿಗಾಗಿ, ಬೇರೊಂದು ಅನುಭವಕ್ಕಾಗಿ ಒಂದು ಹವ್ಯಾಸವಿರಲಿ. ●

# ಧರ್ಮ ಮತ್ತು ಶಿಕ್ಷಣ

— ಮ. ಗ. ಶೆಟ್ಟಿ.

ಇಂದಿನ ನಮ್ಮ ಬಹುತೇಕ ತರುಣರು ಪಠ್ಯಪುಸ್ತಕಗಳಲ್ಲಿ ನಮ್ಮ ಧರ್ಮ ಒಂದನ್ನು ಬಿಟ್ಟು ಬೇರೆಲ್ಲ ವಿಷಯಗಳನ್ನು ಕಲಿತಿರಬಹುದು. ಅವುಗಳನ್ನು ಚೆನ್ನಾಗಿ ಅಭ್ಯಾಸಮಾಡಿ ಉತ್ತಮ ರೀತಿಯಿಂದ ತೇರ್ಗಡೆ ಹೊಂದಿರಬಹುದು. ನಮ್ಮ ಮನಸ್ಸು ಆಕಾಶದಲ್ಲಿ ಹಾರುತಿದ್ದರೂ ನಾವು ನಿಂತಲ್ಲೆ ಕೆಲಸಮಾಡಬೇಕಾಗಿರುವುದರಿಂದ ನಾವು ನಿಂತ ಧರ್ಮದ ನೆಲಗಟ್ಟು ಎಷ್ಟು ಭದ್ರವಾಗಿದೆ ಎಂಬುದನ್ನು ನಾವು ಅರಿತುಕೊಳ್ಳಬೇಕು.

ನಾನು ಹೇಳುವ ಮಾತೇ ಪರಿಪೂರ್ಣವಲ್ಲ. ಯಾಕೆಂದರೆ ನಾವು ಹೇಳುವ ಮಾತು ಕೊಡದೊಳಗೆ ತುಂಬಿ ತಂದ ಸಮುದ್ರ ಜಲ. ನೀವೇ ಇದರೊಳಗಿನ ಒಂದೊಂದು ಅಂಶವನ್ನು ಎತ್ತಿಕೊಂಡು ಮೆಲಕುಹಾಕಿರಿ; ಸಂದೇಹ ಬಂದಾಗ ಇನ್ನಿತರೊಡನೆ ಚರ್ಚಿಸಿ ಒಂದು ನಿರ್ಣಯಕ್ಕೆ ಬನ್ನಿರಿ. ನಿರ್ಣಯಕ್ಕೆ ಬಂದ ಬಳಿಕ ಅದಕ್ಕೆ ಅಂಟಿಕೊಳ್ಳಿ. ನಿಮ್ಮ ವಿಚಾರಗಳಲ್ಲಿ ಭಿನ್ನತೆಯುಂಟಾದ ಮಾತ್ರಕ್ಕೆ ಹಿಂದೆ ಸರಿಯಬೇಕಾದ ಅವಶ್ಯಕತೆಯಿಲ್ಲ. ಒಂದೇ ರೀತಿಯ ಸಮಾನಾಂತರ ಗಿಡಗಳನ್ನು ಬೆಳೆಯುವುದಕ್ಕಿಂತ ಭಿನ್ನ ಭಿನ್ನ ಜಾತಿಯ ಗಿಡಮರಗಳನ್ನು ಬೆಳೆಯುವುದರಲ್ಲಿಯೇ ಚೆಲುವು ಹೆಚ್ಚುತ್ತದೆ. ಆದುದರಿಂದ ಪ್ರತಿಯೊಬ್ಬನೂ ತನ್ನನ್ನು ತಾನು ಅರಿಯಲು ಪ್ರಯತ್ನಿಸಲಿ. ಹಿಂದೂ ಧರ್ಮದಲ್ಲಿ ಎಲ್ಲ ವಿಚಾರಧಾರೆಗಳಿಗೂ ಅವಕಾಶವಿದೆ. ಅದು ಒಬ್ಬ ಸ್ವಾಮಿ, ಒಬ್ಬ ಪ್ರವಾದಿ ಹುಟ್ಟಿಸಿದ ಧರ್ಮವಲ್ಲ; ಆದುದರಿಂದಲೇ ತಿಳಿದವರು "ಸತ್ಯವೊಂದೆ, ಅರಿತವರು ಅನೇಕ ರೀತಿಯಿಂದ ಅರ್ಥ ಮಾಡುವರು" ಎಂದು ಹೇಳಿದ್ದಾರೆ. ಆದುದರಿಂದ ನಮ್ಮ ತರುಣರ ವಿಚಾರಶಕ್ತಿ ನಾನಾರೀತಿಯಿಂದ ನಾನಾ ದಿಕ್ಕುಗಳಲ್ಲಿ ಹರಿಯಲಿ. ಬೇಂದ್ರೆಯವರೆಂದಂತೆ

ನೂರು ಮರ ನೂರು ಸ್ವರ
ಒಂದೊಂದು ಅತಿ ಮಧುರ
ಬಂಧವಿರದ ಬಂಧುರ। ಸ್ವಚ್ಛಂದ ಸುಂದರ ॥

ವಾಗಲಿ.

ಪುಟ್ಟಪ್ಪನವರು ಕರೆ ಕೊಟ್ಟಂತೆ ನಿರಂಕುಶಮತಿಗಳಾಗಿರಿ.

## ಧರ್ಮವೆಂದರೇನು ?

ಮಹಾಭಾರತದ ಶಾಂತಿಪರ್ವದ ೨೬ ನೆಯ ಅಧ್ಯಾಯಲ್ಲಿ ಧರ್ಮದ ಬಗ್ಗೆ ಹೀಗೆ ಹೇಳಿದೆ.

"ಕಾರಣವಿಲ್ಲದೆ ಧರ್ಮದ ಸಣ್ಣ ನಿಯಮವನ್ನು ಸಹ ಹೇಳಿಲ್ಲ. ಸಮಸ್ತಪ್ರಾಣಿಗಳ ಕಲ್ಯಾಣವನ್ನನು-ಲಕ್ಷಿಸಿ ಧರ್ಮ ಪ್ರವಚನವನ್ನು ಮಾಡಿದೆ. ಆದ್ದರಿಂದ ಕಾರಣಗಳನ್ನು ಸಂದರ್ಭಗಳನ್ನು ಪರಿಣಾಮವನ್ನು ವಿಚಾರಿಸಿ ವಿವೇಕದಿಂದ ಧರ್ಮವನ್ನು ಆಚರಿಸತಕ್ಕದ್ದು. ಕೇವಲ ಜನರ ಚರಿತ್ರೆಯನ್ನು ಅನುಸರಿಸಬಾರದು". ಈ ವಚನಗಳಿಂದ ಧರ್ಮ ಶಬ್ದದ ಅರ್ಥ ಸ್ಪಷ್ಟವಾಗುತ್ತದೆ. ಈ ಧರ್ಮ ಶಾಶ್ವತವಾವಾಗಿರಲು ಈಶಾವಾಸ್ಯೋಪನಿಷತ್ತು ನಾವು ಹೇಗೆ ಬಾಳಬೇಕು ಎಂಬುದನ್ನು ಸೂಚಿಸುತ್ತದೆ.

"ಈಶಾವಾಸ್ಯಮಿದಂ ಸರ್ವಂ ಯತ್ಕಿಂಚ-
ಜಗತ್ಯಾಂ ಜಗತ್ ।
ತೇನ ತ್ಯಕ್ತೇನ ಭುಂಜೀಥಾಃ ಮಾಗೃಧಃ ಕಸ್ಯ
ಸಿದ್ಧನಂ ॥

ಈ ಜಗತ್ತಿನಲ್ಲಿ ತೋರುವ ವಸ್ತುಗಳೆಲ್ಲವೂ ಈಶ್ವರನ ಒಡೆತನಕ್ಕೆ ಒಳಪಟ್ಟಿರುತ್ತವೆ. ಆದ್ದರಿಂದ ಧರ್ಮಸಮ್ಮತವಾದ ನ್ಯಾಯವಾದ ಮಾರ್ಗದಿಂದ ನಿನಗೆ

ಎಷ್ಟು ಲಭ್ಯವಾಗುವುದೋ ಅಷ್ಟರಲ್ಲಿಯೇ ಸಾಧ್ಯವಾದಷ್ಟನ್ನು ತ್ಯಾಗಮಾಡಿ ಉಳಿದದ್ದನ್ನು ಅನುಭವಿಸು. ಬೇರೆ ಯಾರೊಬ್ಬರ ಸಂಪತ್ತಿಗೂ ಆಸೆಪಡಬೇಡ' ಎಂದಿದೆ.

ವಿಶ್ವಾತ್ಮ ಭಾವನೆಯಿಂದ ಅಂತ:ಕರಣ ತುಂಬಿರುವ ಮತ್ತು ತಮ್ಮ ತಮ್ಮ ಕರ್ತವ್ಯವನ್ನು ಸತತವಾಗಿ ಮಾಡುತ್ತಿರುವ ಅತ್ಯುಚ್ಚಸಾಮಾಜಿಕ ಅವಸ್ಥೆಯನ್ನು ಕೃತಯುಗವೆಂದು ಬಣ್ಣಿಸಿದ್ದಾರೆ ಆ ಕಾಲದಲ್ಲಿ ಸಾಮಾಜದಲ್ಲಿರುವ ಯಾವತ್ತು ವ್ಯಕ್ತಿಗಳು ಪೂರ್ಣ ಸತ್ವಗುಣ ಸಂಪನ್ನರಿದ್ದುದರಿಂದ ಅವರನ್ನು ಹಂಸ ವರ್ಣದವರೆಂದು ಕರೆದಿದ್ದಾರೆ. ಹಂಸವು ಕಮಲದ ದೇಂಟನ್ನು ತಿಂದು ಬದುಕುವ ನಿರುಪದ್ರವಿ ಪ್ರಾಣಿಯಾದುದರಿಂದ ಸಾಮಾಜಿಕ-ವಿಕಸನದ ಪರಿಪೂರ್ಣ ಅವಸ್ಥೆಗೆ ಅದರ ಉಪಮೆಯನ್ನು ಕೊಡಲಾಗಿದೆ

ಮಾನವೀಯ ಅಂತಃಕರಣದಲ್ಲಿ ಪಶುತ್ವವು ಪೂರ್ಣನಷ್ಟವಾಗಿ ಅದರ ಬದಲು ಸಂಪೂರ್ಣ ದೇವಜೀವನ ಉತ್ಪನ್ನವಾಗುವುದೋ ಆ ಅವಸ್ಥೆಗೆ ಕೃತಯುಗವೆಂದು ಕರೆಯುತ್ತಾರೆ ಎಂದು ಮಹಾಭಾರತದ ಶಾಂತಿ ಪರ್ವದ ೫೯ ನೆಯ ಅಧ್ಯಾಯದಲ್ಲಿ ಹೇಳಿದೆ.

ಆ ಧರ್ಮಯುಗದಲ್ಲಿ ರಾಜ್ಯವಿರಲಿಲ್ಲಾ, ರಾಜನಿರಲಿಲ್ಲಾ; ಶಿಕ್ಷೆ-ಇರಲಿಲ್ಲಾ. ಶಿಕ್ಷಿಸುವವನೆ ಇರಲಿಲ್ಲ. ಯಾಕಂದರೆ ದಂಡವನ್ನು ವಿಧಿಸಬೇಕಾದ ಅಪರಾಧಿಯೇ ಇರಲಿಲ್ಲ. ಎಲ್ಲ ಪ್ರಜೆಗಳೂ ತನ್ನ ಕರ್ತವ್ಯ ಏನು ಎಂಬುದನ್ನರಿತು ಸ್ವಭಾವದಲ್ಲಿಯೂ ಅಂತಃಕರಣದಲ್ಲಿಯೂ ಅಳವಡಿಸಿಕೊಂಡು ಪರಸ್ಪರ ಸಂರಕ್ಷಣೆಯನ್ನು ಮಾಡುತ್ತಲಿದ್ದರು.

ಆದರೆ ಕೆಲಕಾಲಾನಂತರ ಅದಕ್ಕೆ ಅನುಸರಿಸಬೇಕಾದ ಸಂಯಮ ಕೆಲವು ಜನರಲ್ಲಿ ಇಲ್ಲದೇ ಹೋಯಿತು. ಅದರಿಂದಲೇ ಅವರಲ್ಲಿ ಮೋಹ ಉತ್ಪನ್ನವಾಯಿತು. ಮೋಹದ ಪ್ರಭಾವದಿಂದ ಸಾವಕಾಶವಾಗಿ ಅವರ ಸ್ವಾಭಾವಿಕವಾದ ಜ್ಞಾನವಸ್ಥೆ ಭಂಗ ಹೊಂದಿತು, ಮತ್ತು ಕರ್ತವ್ಯದ ತೇಜಸ್ವಿ ತಿಳುವಳಿಕೆಯು ಅವರ ಅಂತಃಕರಣದಲ್ಲಿ ನಷ್ಟಹೊಂದಿತು.

ಈ ಧರ್ಮನಾಶದೊಂದಿಗೆ ಲೋಭವು ಅವರ ಅಂತಃಕರಣದಲ್ಲಿ ಉತ್ಪನ್ನವಾಯಿತು. ಬಳಿಕ ತನಗೆ ಸಿಗಬೇಕು, ಇನ್ನೊಬ್ಬರಿಗೆ ಸಿಗಬಾರದು ಎಂಬ ಕುವಾಸನೆಯು ಅಂತಃಕರಣದಲ್ಲಿ ಉತ್ಪನ್ನವಾದುದರಿಂದ ಕಾಮವಿಕಾರಕ್ಕೆ ಅವರು ಅಧೀನರಾದರು. ಕ್ಷಿಪ್ರದಲ್ಲಿಯೇ ಕಾಮದಸ್ಥಳವನ್ನು ಅಭಿಲಾಷೆ ಪಡೆಯಿತು. ಅದರಿಂದ ಕಾರ್ಯಾಕಾರ್ಯ ವಿವೇಕವು ಪೂರ್ಣವಾಗಿ ನಷ್ಟವಾಯಿತು. ಎಲ್ಲಿ ಹೋಗಬಾರದೋ ಅಲ್ಲಿ ಹೋಗುವುದು. ತಿನ್ನಬಾರದದನ್ನು ತಿನ್ನುವ ಕ್ರಿಯೇ ಪ್ರಾರಂಭವಾಯಿತು. !ವಾಣಿಯ ಪಾವಿತ್ರ್ಯ ನಷ್ಟವಾದುದರಿಂದ ಏನು ಹೇಳಬೇಕು ? ಏನು ಹೇಳಬಾರದು ಎಂಬುದರ ತೂಕ-ತಪ್ಪಿತು. ಇಷ್ಟೇ ಅಲ್ಲ, ಒಳಿತುಯಾವುದು ? ಕೆಡಕುಯಾವುದು ಎಂಬ ವಿವೇಕ-ದ ನಷ್ಟವಾಗಿ ಆತನ ಸತ್ಯದ ಅಧಿಷ್ಠಾನ ನಷ್ಟವಾಯಿತು. ಅದರಿಂದ ಧರ್ಮವೂ ನಷ್ಟವಾಯಿತು.

ಧರ್ಮದ ಸೂಕ್ಷ್ಮವನ್ನು ವಿವರವಾಗಿ ಎಲ್ಲರೂ ಅರಿತುಕೊಳ್ಳಲಾರರು. ಇಂದಿನ ಸುಶಿಕ್ಷಿತ ತರುಣರು ಕಡಿಮೆ ಶ್ರಮ, ಹೆಚ್ಚು ಸಂಬಳ ಎಂಬ ವಿಚಾರವನ್ನು ಬಿಟ್ಟುಗೊಟ್ಟರೆ ಧರ್ಮದ ಸಾಮ್ರಾಜ್ಯ ಸ್ಥಾಪನೆಗೆ ಅನುಕೂಲವಾಗುವುದು.

ಶಿಕ್ಷಣ:

ಭಾರತೀಯರು ಶಿಕ್ಷಣ ಯಾವ ರೀತಿ ಇರಬೇಕು. ಎನ್ನುವ ಬಗ್ಗೆ ಸರಕಾರ ಅನೇಕ ಆಯೋಗಗಳನ್ನು ನಿಯಮಿಸಿದೆ. ಅವೆಲ್ಲವೂ ನೀತಿ ಮತ್ತು ಧರ್ಮಕ್ಕೇ ಹೆಚ್ಚಿನ ಮಹತ್ವವನ್ನು ಕೊಟ್ಟಿವೆ. ಮತ್ತು ಈ ಆಯೋಗಗಳ ಮುಖ್ಯಸ್ಥರು ರಾಧಾಕೃಷ್ಣನ್ನರಂಥ ತತ್ವಜ್ಞಾನಿಗಳು, ಡಾ ಸಂಪೂರ್ಣನಂದರಂಥ ರಾಜಕೀಯ ತಜ್ಞರು, ಕೋಠಾರಿಯವರಂತಹ ಶಿಕ್ಷಣ ತಜ್ಞರೂ ಇದ್ದರು. ವಿದೇಶೀಯರಾಗಿ ಭಾರತದ ಸ್ವಾತಂತ್ರ್ಯಕ್ಕೆ ಶ್ರಮಿಸಿದ ಆ್ಯನಿಬೆಸೆಂಟಮ್ಮನವರು ಭಾರತದ ಶಿಕ್ಷಣ ಪದ್ಧತಿ ಕೇವಲ ಪಾಶ್ಚಾತ್ಯರ ಅನುಕರಣೆಯಾಗಬಾರದೆಂದು ಎಚ್ಚರಿಸಿದಾರೆ. ೧೯೦೦ ರಲ್ಲಿ.

" With regard to that modern

education, permit me to say that you will be most unwise; if you adopt for the education of your women, a mere copy of the education given to western women. It would not build up women of the ancient Aryan Type. The object of the western education is that, the women educated on the same lines as men, may be able to compete with them in the various walks of life and earn their own livelihood as men earn theirs. Owing to the social conditions there, a very large number of women remain unmarried, who practically have no supporters. Thy are left to support them selves and to gain their own livelihood"

ಪಾಶ್ಚಾತ್ಯ ಸ್ತ್ರೀಯರು ವಿವಾಹವಿಚ್ಛೇದನ ಮಾಡುವುದರಿಂದ ಅವಿವಾಹಿತರಾಗಿ ಉಳಿಯುವುದರಿಂದ ತಮ್ಮ ಜೀವನಕ್ಕಾಗಿ ಸ್ವಾವಲಂಬಿಗಳಾಗಬೇಕಾಗುವುದರಿಂದ ಪಡೆಯುವ ಶಿಕ್ಷಣ ಭಾರತೀಯರಿಗೆ ಅನುಕರಣೀಯವಲ್ಲ ಎಂದಿದ್ದಾರೆ. ಸ್ವಾಮಿವಿವೇಕಾನಂದರು "We must have life building, man making, character making assimilation of ideas" (ನಾವು ಅರಗಿಸಿಕೊಳ್ಳುವ ಭಾವನೆ, ವಿಚಾರ ನಮ್ಮನ್ನು ಮನುಷ್ಯರನ್ನಾಗಿ, ಗುಣಶೀಲರನ್ನಾಗಿ ಮಾಡುವಂತ ಶಿಕ್ಷಣವಿರಬೇಕು.) ಎಂದಿದ್ದಾರೆ. ಗುರುದೇವ ಠಾಗೋರರು "ನಮ್ಮ ಸ್ಕೂಲು ಕಾಲೇಜುಗಳಲ್ಲಿ ಭಾರತೀಯವಾದದು ಅಲ್ಪವಾಗಿದ್ದು, ಪಶ್ಚಿಮದಿಂದ ಬೇಡಿ ತಂದ ಭಿಕ್ಷಾನ್ನವೇ ಬಹಳವಾಗಿದೆ" ಎಂದಿದ್ದಾರೆ (Unfortunately the education given in our Government school and colleges has very little that is Indian and mostly consists of alms begged from the west)

ಗೀತೆಯನ್ನು ಶ್ರೀ ಕೃಷ್ಣ ಅರ್ಜುನನ ಮೇಲೆ ಒತ್ತಾಯದಿಂದ ಹೇರಲಿಲ್ಲ. ಆತ ನಿನ್ನ ವಿವೇಕಕ್ಕೆ ಏನು ಅನ್ನಿಸುತ್ತಿದೆಯೋ ಅದನ್ನು ಮಾಡು ಎಂದು ಬುದ್ಧಿ ಸ್ವಾತಂತ್ರ್ಯವನ್ನು ಕೊಟ್ಟಿದ್ದಾನೆ. ಆದುದರಿಂದ ನಾವು ಗಿಳಿಪಾಠಗಳನ್ನು ಒಪ್ಪಿಸುತ್ತ ಕಾಲಹರಣ ಮಾಡದೆ, ಜಿಜ್ಞಾಸೆಮಾಡಿ' ಸತ್ಯಾಸತ್ಯ ವಿವೇಚನೆಯಲ್ಲಿ ತೊಡಗಿ, ನಮ್ಮ ಎದೆಯ ದನಿಯನ್ನು ಅನುಸರಿಸಿ ನಡೆಯಬೇಕು. ಮನವರಿಯದ ಕುಳ್ಳತನವಿಲ್ಲದುದರಿಂದ ನಾವು ಧರ್ಮದ ದಾರಿಯನ್ನು ಹಿಡಿಯಬೇಕು.

*With best compliments from:*

MALBAR KRISHNA BEEDIS



MANDIPET,

**TUMKUR.**

“ ಅಮರಕೋಶ ” ದ ಬಗೆಗೆ

# ನಿಮಗೇನು ಗೊತ್ತು?

—ಶಾಂತಲಾ ವೆಂಕಟೇಶ್

ಪ್ರಾಚೀನ ಕಾಲದ ಜನಜೀವನದಲ್ಲಿ ಅಮರಕೋಶವು ಒಂದು ಪ್ರಮುಖವಾದ ಪಾತ್ರವನ್ನು ವಹಿಸಿತ್ತು. ಹಿಂದಿನವರು ಮಕ್ಕಳಿಗೆ ಬಾಲ್ಯದಿಂದಲೇ ಅಮರ ಕೋಶದ ಶ್ಲೋಕಗಳನ್ನು ಬಾಯಿಪಾಠ ಮಾಡಿಸುತ್ತಿದ್ದರು. ಇದರಿಂದ ಉಚ್ಚಾರಣೆಯು ಶುದ್ಧಿಯಾಗಿ ಶಬ್ದ ಮತ್ತು ಅರ್ಥ ಜ್ಞಾನದ ವೃದ್ಧಿಯಾಗುತ್ತಿತ್ತು. ಈ ಕಾರಣದಿಂದಲೇ ‘ ಕೋಶ ಓದಬೇಕು; ದೇಶ ಸುತ್ತಬೇಕು” “ಅ ಆ ಬಾರದಿದ್ದರೂ ಅಮರವಾದರೂ ಹೇಳು” ಎಂದು ಕನ್ನಡ ವಾಡಿಕೆಯ ನುಡಿಗಳಿಂದಲೇ ಅದರ ಮಹತ್ವವನ್ನು ತಿಳಿಯಬಹುದಾಗಿದೆ. ಅಮರ ಕೋಶವು ಸಂಸ್ಕೃತದ ಶಬ್ದ ಕೋಶಗಳಲ್ಲೆಲ್ಲಾ ಪ್ರಖ್ಯಾತವಾದ ಮತ್ತು ಜನಪ್ರಿಯವಾದ ಕೃತಿಯೆನಿಸಿಕೊಂಡಿದೆ. ಈ ಗ್ರಂಥದ ಕರ್ತೃವೇ ಅಮರಸಿಂಹ. ಇದಕ್ಕೆ ಆತನು “ನಾಮಲಿಂಗಾನುಶಾಸನ” ವೆಂಬ ಹೆಸರಿಟ್ಟದ್ದನಂತೆ ಅಂದರೆ ಇದು ಲಿಂಗ–ವಚನಾದಿ ವ್ಯಾಕರಣಾಂಶಗಳನ್ನು ಕ್ರಮ ಬದ್ಧವಾದ ರೀತಿಯಲ್ಲಿ ವರ್ಗೀಕರಿಸಿ ತಿಳಿಸುತ್ತದೆ. ಇದು ಶ್ಲೋಕ ರೂಪದಲ್ಲಿ ಬರೆಯಲ್ಪಟ್ಟು ಬಾಯಿಪಾಠಮಾಡಲು ಸುಲಭವಾದ ಒಂದು ಕೃತಿಯಾಗಿದೆ. ಆದರೆ ಇದರ ಹೆಸರೇ ಈಗಿನ ಎಷ್ಟೋ ಜನರಿಗೆ ತಿಳಿದಿಲ್ಲ. ಇದು ವಿಷಾದಕರವಾದ ಸಂಗತಿಯೇ ಸರಿ.

ಈಗ ಈ ಗ್ರಂಥದಲ್ಲಿನ ಅಂಶವನ್ನು ಕುರಿತು ಹೇಳುವುದಾದರೆ ಅಮರಕೋಶದಲ್ಲಿ ಮುಖ್ಯವಾಗಿ ಮೂರು ಕಾಂಡಗಳಿವೆ.

ಮೊದಲನೆಯ ಕಾಂಡದಲ್ಲಿ,

ಸ್ವರ್ಗ, ನರಕ, ಆಕಾಶ, ಮತ್ತು ದೇವತೆಗಳ ವಿಚಾರ ಹೇಳಲ್ಪಟ್ಟಿದೆ.

ಎರಡನೆಯ ಕಾಂಡದಲ್ಲಿ,

ಭೂಮಿ, ಸಸ್ಯ, ಮತ್ತು ಮಾನವಾದಿ ವಿಷಯಗಳನ್ನು ಕುರಿತು ಹೇಳಲ್ಪಟ್ಟಿದೆ.

ಮೂರನೆಯ ಕಾಂಡದಲ್ಲಿ,

ವ್ಯಾಕರಣಾಂಶಗಳನ್ನು, ಅನೇಕ ಅರ್ಥಗಳನ್ನು ಕುರಿತು ಹೇಳಲ್ಪಟ್ಟಿದೆ.

ಈ ಮೂರು ಕಾಂಡಗಳೂ ಸೇರಿದರೆ ಸುಮಾರು 12,000 ಶಬ್ದಗಳಾಗುತ್ತವೆ.

ಅಮರಕೋಶವು ಸಾಹಿತಿಗಳಿಗೆ ಮಾತ್ರ ಬೇಕಾದ ಗ್ರಂಥವಾಗಿರಲಿಲ್ಲ; ಅದು ಅಂದಿನ ಸಾಮಾಜಿಕ, ವೈಜ್ಞಾನಿಕ, ಸಾಂಸ್ಕೃತಿಕ, ಕಲೆ ಮುಂತಾದ ವಿಷಯಗಳನ್ನು ಪರಿಚಯ ಮಾಡಿಕೊಡುವ ಗ್ರಂಥವಾಗಿತ್ತು. ಇದನ್ನು ಕುರಿತು ಬರೆಯಲ್ಪಟ್ಟಿರುವ ವ್ಯಾಖ್ಯಾನಗಳಲ್ಲಿ 17 ನೇ ಶತಮಾನದಲ್ಲಿದ್ದ ಭಾನುಜದೀಕ್ಷಿತರ ವ್ಯಾಖ್ಯಾನವೇ ಪ್ರಸಿದ್ಧವಾದುದಾಗಿದೆ.

ಜಗತ್ತಿನ ಅನೇಕ ಭಾಷೆಗಳಿಗೆ ಅಮರಕೋಶವು ಅನುವಾದಿಸಲ್ಪಟ್ಟಿದೆ. ಕ್ರಿ. ಶ. 6 ನೇ ಶತಮಾನಕ್ಕೆ ಮುಂಚೆಯೇ ಅದನ್ನು ಚೀನಿ ಭಾಷೆಗೆ ಅನುವಾದಿಸಲಾಗಿತ್ತು. ಆಂಗ್ಲ, ಲ್ಯಾಟಿನ್, ಫ್ರೆಂಚ್ ಮತ್ತು ಅನೇಕ ಭಾರತೀಯ ಭಾಷೆಗಳಿಗೆ ಅದು ಅನುವಾದಿಸಲ್ಪಟ್ಟಿದೆ. ಕನ್ನಡದಲ್ಲೂ ಅಮರಕೋಶದ ಕೆಲವು ವ್ಯಾಖ್ಯಾನಗಳು ಸಿಕ್ಕುತ್ತವೆ. ಈಗಾಗಲೇ ಕನ್ನಡಲಿಪಿಯಲ್ಲಿ ಪರಿಷ್ಕೃತ ಅಮರಕೋಶ ಪ್ರಕಟವಾಗಿದೆ. ಇದರಲ್ಲಿ ಅಮರಸಿಂಹನ ವಿಷಯ ಅಷ್ಟಾಗಿ ಪ್ರಸ್ತಾಪಿಸಲ್ಪಟ್ಟಿಲ್ಲ.

ಅಮರಸಿಂಹನು ಆರನೇ ಶತಮಾನಕ್ಕಿಂತಲೂ ಹಿಂದೆ ಇದ್ದ ಅಥವಾ ಐದನೇ ಶತಮಾನದ ಮಧ್ಯಭಾಗದಲ್ಲಿ ಜೀವಿಸಿದ್ದ ಕವಿಯೆಂದು ಪ್ರತೀತಿಯಿದೆ. ಅಮರ ಕೋಶದ ಪ್ರಥಮ ಕಾಂಡದಲ್ಲಿ ಬುದ್ಧನ ನಾಮಾಂಕಿತಗಳನ್ನು ತಿಳಿಸಿ ಅನಂತರ ಬ್ರಹ್ಮನೇ ಮೊದಲಾದ ದೇವತೆಗಳ ನಾಮಾಂಕಿತಗಳಿರುವುದರಿಂದ ಅಮರ ಸಿಂಹನು ಬೌದ್ಧ ಮತಾನುಯಾಯಿ ಆಗಿದ್ದಿರಬಹುದೆಂದು ತಿಳಿಯುತ್ತದೆ. ಒಟ್ಟಿನಲ್ಲಿ ಅಮರಕೋಶವು ರಚನೆಯಾಗಿ 1400 ವರ್ಷಗಳಾಗಿದ್ದರೂ ಅದನ್ನು ಸಂಸ್ಕೃತ ಭಾಷಾಧ್ಯಯನ ಮಾಡುವವರು ಮಾತ್ರ ಒಂದು ಪ್ರಮಾಣ ಗ್ರಂಥವನ್ನಾಗಿ ಉಪಯೋಗಿಸುತ್ತಾರೆ. ಈ ರೀತಿಯಲ್ಲಿ ಅಮರಕೋಶವು ಇಂದಿಗೂ ಸಂಸ್ಕೃತಾಭ್ಯಾಸಿಗಳಿಗೆ ಒಂದು ಮಹತ್ವದ ಕೃತಿಯೆನಿಸಿದೆ. —



# ಪಂಚಾಮೃತ

—ಜಿ. ಪಿ. ದೈವಜ್ಞಾಚಾರ್ಯ

★ ವಸುಧೆಯೆಡೆ ಹಾಲ್ಜೇನ ಧುನಿಯನ್ನು ಧುಮುಕಿಸುವ
ಚಂದ್ರಮನ ಉದಯವಾಯ್ತು !
ಮೊಸರು ಆಗಸಗಂಗೆ; ಚಿಕ್ಕೆಗಳು ಸಕ್ಕರೆಯು
ತುಪ್ಪವೇ ಇಲ್ಲವಾಯ್ತು !

★ ತೇಲುತಿಹ ಪೂಗದಿರ ನವನೀತದಂತಿರಲು
ಕರಗಿಪರೆ ಇಲ್ಲವಾಯ್ತು !
ಆಲೋಚಿಸುತ ನಾನು ಮಲಗಿದ್ದೆನೆಂಬಂವು
ಮುಂಗೋಳಿ ಕೂಗಲಾಯ್ತು.

★ ನಸುಕಿನಲಿ ನೋಡುತಿರೆ ಹಾಲ್ಜೇನ ಧುನಿಯಲ್ಲಿ
ಸಕ್ಕರೆಯು ಕರಗಿಹೊಯ್ತು
ಮೊಸರೆಲ್ಲ ರಾಸಾಯ್ತು; ನವನೀತ ಕರಗುತಲಿ
ಕೊನಗೊಮ್ಮೆ ತುಪ್ಪವಾಯ್ತು

★ ಬೆಣ್ಣೆಯನು ಕರಗಿಸಲು ಯಾವ ಬಿಸಿ ತಗಲಿತ್ತು ?
ಯೋಚನೆಗೆ ನಿಲುಕದಾಯ್ತು
ಕಣ್ಣೆದುರ ಕೆಂಬೊನಲು ಯೋಚನೆಗೆ ಉತ್ತರಿಸೆ
ಕೆಂಗದಿರನುದಯವಾಯ್ತು

★ ರವಿಯುದಯದಲಿ ಪಂಚ ವಸ್ತುಗಳ ಸಂಗಮಕೆ
ಮೂಡಣವು ಕುಂಭವಾಯ್ತು
ಶಿವಭರಿತ ಜಗಕೆ ಪಂಚಾಮೃತದ ಅಭಿಷೇಕ-
ದಂದದಲಿ ಬೆಳಗು ಆಯ್ತು

# ಈಸಬೇಕು ಇದ್ದು ಜೈಸಬೇಕು

—ಚಿರಂಜೀವಿ

ಹುಟ್ಟುವುದು-ಸಾಯುವುದು, ಈ ಎರಡು ಘಟನೆಗಳ ನಡುವಿನ ಬದುಕು ಮನುಷ್ಯ ಜೀವನದಲ್ಲಿ ಅತ್ಯಂತ ರೋಚಕವಾದ ಘಟ್ಟ. ಈ ಘಟ್ಟದಲ್ಲಿ ನವರಸಗಳ ಲೇಪನವಾಗಿ, ಅದರ ಎಲ್ಲ ಅನುಭವಗಳನ್ನೂ ಮನುಷ್ಯ ಗಳಿಸುತ್ತಾನೆ. ಹುಟ್ಟುವುದು–ಸಾಯುವುದು ಹಣೆಬರಹ, ಮೊದಲೇ ನಿರ್ಧರಿಸಲಾಗಿರುವ ನಿಶ್ಚಿತ ಘಟನೆಗಳು, ಅದನ್ನು ಯಾರಿಂದಲೂ ಬದಲಾಯಿಸಲು ಸಾಧ್ಯವಿಲ್ಲ, ಎನ್ನುವುದು ಹಿಂದಿನಿಂದಲೂ ತೀರ್ಮಾನವಾಗಿರುವ ಅಂಶ. ಅದನ್ನು ಎಲ್ಲ ಕಾಲದವರೂ ಒಪ್ಪಿದ್ದಾರೆ. ಈಗಿನ ಕಾಲದಲ್ಲಿ ಕೆಲವರು ಒಪ್ಪಬಹುದು ಅಥವಾ ಬಿಡಬಹುದು; ಜನನ ನಿಯಂತ್ರಣ ಟೆಸ್ಟ್ ಟ್ಯೂಬ್ ಬೇಬಿಗಳ ಸೃಷ್ಟಿ, ಬದಲಿ ಹೃದಯ ಮೊದಲಾದ ಬೇರೆ ಅಂಗಗಳ ಜೋಡಣೆ ಮೊದಲಾದವುಗಳಿಂದ ಜನನ–ನಿಧನಗಳನ್ನು ಮುಂದೂಡುವ ಪ್ರಯತ್ನವನ್ನು ಮಾನವ ನಿರಂತರವಾಗಿ ಮಾಡುತ್ತಿರುವುದರಿಂದ, ಹಿಂದಿನ ಅಭಿಪ್ರಾಯಗಳನ್ನು ಮುಂದುವರಿದ ನಾಗರಿಕ ಜನ ಒಪ್ಪದಿರಬಹುದು. ಆದರೆ ನಮ್ಮ ದೇಶದಲ್ಲಿ ಬಹುಮಂದಿ ಒಪ್ಪಿಕೊಂಡಿರುವ ವಿಷಯ ಇದು. ಆಚಾರ–ವಿಚಾರಗಳನ್ನು, ಸಂಪ್ರದಾಯಗಳನ್ನು, ದೈವಿಕ ವಿಚಾರಗಳಲ್ಲಿ ನಂಬಿಕೆಯನ್ನು ಇಟ್ಟುಕೊಂಡಿರುವ ಯಾರೇ ಆಗಲೀ ಈ ಈ ನಂಬಿಕೆಗೆ ಎದಿರಾಡುವುದಿಲ್ಲ.

ಈ ನಡುವೆ ಬರುವ ಬದುಕು, ಅಸಾಧ್ಯ ತೊಡಕುಗಳ, ದುಃಖದುಮ್ಮಾನಗಳ, ಕಷ್ಟ-ಸುಖಗಳ ಮಿಶ್ರಣವಾದ ಒಂದು ರಸಾಯನ. ಪೂರ್ವಾರ್ಜಿತ ಪಾಪ ಪುಣ್ಯಗಳ ಫಲದಿಂದ ಮನುಷ್ಯಜೀವ ಈಗಿನ ಜನ್ಮದಲ್ಲಿ ಇಷ್ಟಿಷ್ಟು ಕಷ್ಟ-ಕಾರ್ಪಣ್ಯಗಳನ್ನು ಅನುಭವಿಸಲೇ ಬೇಕು ಎಂಬ ವಿಚಾರವಿದೆ. ರೋಗ-ರುಜಿನಗಳಿಗೆ, ಬಡತನ ಸಿರಿತನಗಳಿಗೆ ಪೂರ್ವಾರ್ಜಿತದ ಸಂಬಂಧ ಕಲ್ಪಿಸಲಾಗಿದೆ. ಮನುಷ್ಯ ಇವುಗಳನ್ನೆಲ್ಲಾ ತಪ್ಪಿಸಿಕೊಳ್ಳಲು ಸಾಧ್ಯವೇ ಇಲ್ಲ ಎಂಬ ಮಾತಿದೆ. ಇದನ್ನೆಲ್ಲಾ ತೀವ್ರವಾಗಿ ಯೋಚಿಸಿದಾಗ ಬದುಕಿನಲ್ಲಿ ಯಾವ ಸುಖವೂ ಕಾಣುತ್ತಿಲ್ಲಾ. ಬದುಕುವುದು ಒಂದು ಯಾಂತ್ರಿಕ ಚಟುವಟಿಕೆ ಎಂಬಂತೆ ಕಾಣುತ್ತದೆ. ಎಲ್ಲವೂ ಮೊದಲೇ ತೀರ್ಮಾನವಾದ ಮೇಲೆ ನಾವು ಮಾಡುವುದಾದರೂ ಏನು? ಎಂದು ಮನುಷ್ಯ ಸುಮ್ಮನಿದ್ದು ಬಿಡಬಹುದು. ಅಂದರೆ ಬದುಕಿಗೆ ಇಷ್ಟೇ ಅರ್ಥವೇ? ನಮ್ಮನ್ನು ಭುವಿಗಿಳಿಸಿದ ಭಗವಂತ ನಮ್ಮಿಂದ ಎದುರು ನೋಡುವುದು ಬೇರೇನಿಲ್ಲವೇ?

ಏನೇ ಇರಲಿ, ಹಣೆಬರಹ-ವಿಧಿ, ಪೂರ್ವಾರ್ಜಿತ ಪಾಪ-ಪುಣ್ಯ ಇವೆಲ್ಲಾ ಎಷ್ಟಾದರೂ ಇರಲಿ, ಬಂದದ್ದನ್ನು ಅನುಭವಿಸಲೇ ಬೇಕು ಎಂದರೆ ಅನುಭವಿಸಿಯೇ ಬಿಡೋಣ. ಆದರೆ ಮನುಷ್ಯ ಪ್ರಯತ್ನ ಎಂಬುದೊಂದಿದೆಯಲ್ಲ, ಅದನ್ನು ಮರೆತು ಬಿಡಲು ಸಾಧ್ಯವೇ? ಬದುಕು ಎಷ್ಟೇ ದುರ್ಭರವಾಗಿರಲಿ, ಅದನ್ನು ಸರಾವಾಗಿ–ಸಹಿಸಲು ಸಾಧ್ಯವಾಗುವಂತೆ ಅಳವಡಿಸಿಕೊಂಡು ಬದುಕಬಹುದಲ್ಲವೇ?

ನನಗೆ ಚೆನ್ನಾಗಿ ತಿಳಿದಿರುವ ದಂಪತಿಗಳೂ ಬ್ಬರಿದ್ದಾರೆ. ಅವರು ಮದುವೆಯಾಗಿ ಇನ್ನೂ ಒಂದು ವರ್ಷವೂ ಆಗಿಲ್ಲ. ಮಗುವೂ ಆಗಿಲ್ಲವೆನ್ನಿ. ಅವರಲ್ಲಿ ಗಂಡ-ಹೆಂಡತಿ ಇಬ್ಬರೂ ನನ್ನನ್ನು ಪ್ರತ್ಯೇಕವಾಗಿ ಕಂಡಾಗಲೆಲ್ಲಾ ಒಬ್ಬರ ಮೇಲೊಬ್ಬರು ಏನಾದರೂಂದು ದೂರು ಹೇಳುತ್ತಾರೆ. ಇಬ್ಬರಿಗೂ ಏನೋ ಅತೃಪ್ತಿ. ಒಮ್ಮೆ ಆತ ಕೋಪದಿಂದ ಆಕೆಯ ಕೆನ್ನೆಗೆ ಏಟು ಬಿಗಿದಿದ್ದನಂತೆ. ಗಂಡ–ಹೆಂಡತಿ ದೈನಂದಿಕ ಬದುಕನ್ನು ಯಾಂತ್ರಿಕವಾಗಿ ಮಾಡುತ್ತಿದ್ದರೇ ವಿನಃ,

ಯಾವ ಪ್ರೀತಿ-ವಿಶ್ವಾಸ, ಆತ್ಮೀಯತೆಗಳನ್ನೂ ಬೆಳೆಸಿಕೊಳ್ಳಲಿಲ್ಲ. ಅವರಿಬ್ಬರಲ್ಲಿ ಮಧುರವಾದ ಸಂಬಂಧವೆನ್ನುವುದು ಆಗಿರಲೇ ಇಲ್ಲ. ಬಹಳ ದಿವಸಗಳು ಅವರಿಬ್ಬರನ್ನು ಗಮನಿಸಿದ ಮೇಲೆ ನನಗೆ ಅನಿಸಿದ್ದು; ಅವರಲ್ಲಿ ಮೂಲತಃ ಯಾವ ತಿಕ್ಕಾಟವೂ ಇರಲಿಲ್ಲ. ಅವರಿಬ್ಬರೂ ಒಬ್ಬರನ್ನೊಬ್ಬರು ಸರಿಯಾಗಿ ಅರ್ಥ ಮಾಡಿಕೊಂಡಿರಲಿಲ್ಲ. ತಮ್ಮ ತಮ್ಮ ಅನಿಸಿಕೆಗಳಲ್ಲಿ ಇನ್ನೊಬ್ಬರ ಬೇಕು ಬೇಡಗಳನ್ನು ಗಮನಿಸಿಯೇ ಇರಲಿಲ್ಲ. ಇಬ್ಬರೂ ಬುದ್ಧಿವಂತರು. ಇಬ್ಬರಿಗೂ ಪ್ರತ್ಯೇಕ ಯೋಚನಾಶಕ್ತಿ ಇತ್ತು. ಸಣ್ಣ ಪುಟ್ಟ ವಿಷಯಗಳಿಗಾಗಿ ಅವರಲ್ಲಿ ಒಮ್ಮತ ಬರದೇ ಕೊನೆಗೆ ವಾಗ್ವಾದದಲ್ಲಿ ಮುಕ್ತಾಯವಾಗುತ್ತಿತ್ತು. ತಮ್ಮ ಬದುಕು ಸುಂದರವಾಗಲು, ರಸಮಯವಾಗಲು ಅವರಲ್ಲಿ ಬೇಕಾಗಿದ್ದದ್ದು ಒಂದು ಸಣ್ಣ ಸರಿಯಾದ ವ್ಯವಸ್ಥಿತ ರೀತಿ. ಹೊಂದಾಣಿಕೆ.

ಹೀಗೆ ಮನುಷ್ಯನ ಬದುಕು ಸಹಿಸುವಂತಾಗಲು ಅರ್ಥಮಯವಾದ ಹೊಂದಾಣಿಕೆ, ವ್ಯವಸ್ಥೆ ಬೇಕು. ಸುತ್ತಮುತ್ತಲಿನ ಪರಿಸರವನ್ನು ತನ್ನ ಗುಣಕ್ಕೆ ಅನುಗುಣವಾಗಿ ಹೊಂದಿಕೊಳ್ಳಲು ಮನುಷ್ಯ ಕಲಿಯಬೇಕು. ತನ್ನ ಬದುಕಿಗೆ ಒಂದು ಆವರಣ ಹಾಕಿಕೊಂಡು, ಆ ಆವರಣದಲ್ಲಿ ಕೆಲವಾರು ನೀತಿ-ನಿಯಮಗಳನ್ನು ಸೃಷ್ಟಿಸಿಕೊಂಡು, ಅದಕ್ಕನುಗುಣವಾಗಿ ಬದುಕನ್ನು ಮುಂದುವರಿಸಿ, ಸಿಕ್ಕು ಸಿಕ್ಕಾಗಿರುವ ಇರುವಿಕೆಯನ್ನು ಬಿಡಿಸಿ ಸರಳಮಾಡಿಕೊಳ್ಳಬೇಕು.

ಆಸೆಯೇ ದುಃಖಕ್ಕೆ ಕಾರಣ ಎಂಬುದು ಬಹಳ ಸತ್ಯವಾದ ಮಾತು. ಆಸೆ-ಆಮಿಷಗಳು ಮನುಷ್ಯನ ಬದುಕನ್ನು ದುಃಖಮಯವನ್ನಾಗಿ ಮಾಡಿವೆ. ಆಸೆಯನ್ನು ಪೂರೈಸಿಕೊಳ್ಳಲಾಗದ ನಿರಾಸೆಯಿಂದ ಮನುಷ್ಯ ತ್ರಿಶಂಕು ಸ್ಥಿತಿಯಲ್ಲಿ ಬಿದ್ದು ತೊಳಲಾಡುತ್ತಾನೆ. ಆದ್ದರಿಂದ ಬಹುಮುಖ್ಯವಾಗಿ ನಾವು ನಮಗೆಟುಕದ ಆಕಾಂಕ್ಷೆಗಳನ್ನು ಮೊದಲೇ ಕೈಬಿಡುವುದೊಳ್ಳೆಯದು. ಅಂದರೆ ಇದು ಬದುಕಿನ ಪ್ರಗತಿಗೆ ಯಾವರೀತಿಯೂ ಅಡ್ಡ ಬರಬೇಕಾಗಿಲ್ಲ. ಓದು-ಉದ್ಯೋಗ-ವರಮಾನ ಇವುಗಳು ಒಮ್ಮೊಮ್ಮೆ ಮನುಷ್ಯ ಪ್ರಯತ್ನವನ್ನೂ ಮೀರಿ ಮೆಟ್ಟಿ ನಿಲ್ಲುತ್ತವೆ. ಅವಕಾಶ-ಅದೃಷ್ಟಗಳ ಆಟದಲ್ಲಿ ಪ್ರಯತ್ನದ ಫಲ ಏರುಪೇರಾಗುತ್ತದೆ. ಮನುಷ್ಯ ಭರಿಸಬೇಕಾದ ಸಂಗತಿ ಇದು.

ಆಸೆ-ಅಮಿಷಗಳಿಗೆ ಬಲಿಯಾಗದಂತೆ ನೋಡಿಕೊಂಡಮೇಲೆ ಜೀವನ ಸರಳವಾಗಿಸಿಕೊಳ್ಳಬೇಕು. ಯಾವುದಕ್ಕೂ ಅತಿಯಾಗಿ ಅಂಟಿಕೊಳ್ಳದೇ, ಉದ್ವೇಗಗೊಳ್ಳದೇ ಶಾಂತವಾಗಿ ಮುಂದುವರಿಯಬೇಕು. ಯಾವುದೋ ಒಂದು ಮಟ್ಟದಲ್ಲಿ ಎಲ್ಲರೂ ಸುಖಪಡುತ್ತಿದ್ದಾರೆ, ತಾನು ಆ ಮಟ್ಟ ಏರಿಲ್ಲ ಎಂಬ ಕೊರಗು ಹತ್ತಿಕೊಳ್ಳುವುದಕ್ಕೆ ಮೊದಲೇ, ತಾನು ಏರಬಹುದಾದ ಮಟ್ಟವನ್ನು ನಿರ್ಧರಿಸಿಕೊಂಡು, ಅದಕ್ಕೊಳಪಟ್ಟು ಬದುಕುವುದು ಜಾಣತನ. ಇನ್ನೊಬ್ಬರಿಗೆ ತನ್ನನ್ನು ಹೋಲಿಸಿಕೊಂಡು ಕಷ್ಟಪಡುವುದಕ್ಕಿಂತ, ತನ್ನ ಪ್ರತ್ಯೇಕತೆಯನ್ನು ಕಂಡು ಅರ್ಥಮಾಡಿಕೊಂಡು ಮೆಲ್ಮಟ್ಟದ ಭಾವನೆಯನ್ನು ಅನುಭವಿಸಿ ಸುಖಪಡುವುದು ಆರೋಗ್ಯಕರ.

ಇವೆಲ್ಲಕ್ಕೂ ಹೆಚ್ಚಾಗಿ ದೇವರಲ್ಲಿ, ದೇವತ್ವದಲ್ಲಿ ಅಪಾರ ನಂಬಿಕೆ, ಮನುಷ್ಯನ ಅನೇಕ ನೋವುಗಳನ್ನು ಕರಗಿಸಬಲ್ಲದು. ದೈವತ್ವದಲ್ಲಿ ಭಕ್ತಿ ಹೆಚ್ಚಾದಂತೆಲ್ಲಾ ಮನಸ್ಸು ಸಾಂಸಾರಿಕ ತೊಂದರೆಗಳಿಂದ ತಪ್ಪಿಸಿಕೊಂಡು ಬೇರೆಡೆ ಈಡಾಗುವುದು ಸಾಧ್ಯವಾಗುವುದು. ದೈವತ್ವದಲ್ಲಿ ಈಡಾಗುವುದೆಂದರೆ ಪೂರ್ತಿ ಸಂನ್ಯಾಸಿ ಮನೋಭಾವವನ್ನೇ ತಾಳಬೇಕು ಎಂದೇನೂ ಇಲ್ಲ. ಪ್ರಯತ್ನವೆಲ್ಲಾ ತನ್ನದು, ಫಲ ಕೊಡುವ ಶಕ್ತಿ ಬೇರೆಯವನದು. ಎಂಬ ತೀರ್ಮಾನ ತಂದುಕೊಳ್ಳುವುದರಲ್ಲಿ ದೈವತ್ವ ಸಹಾಯಕವಾಗುತ್ತದೆ. ಆಗ ಆಸೆಯೆಂಬುದೂ ಇಲ್ಲ, ನಿರಾಸೆಯೆಂಬುದೂ ಇಲ್ಲ. ಇಷ್ಟರಮಟ್ಟಿಗೆ ಬದುಕಿನ ದುರ್ಭರತೆಯನ್ನು ಅರ್ಧದಷ್ಟು ಕಡಿಮೆ ಮಾಡಬಹುದು.

'ಪ್ರೀತಿ' ಎಂಬ ಪದಕ್ಕಿರುವಷ್ಟು ಶಕ್ತಿ ನಮ್ಮ ಅರ್ಥಕ್ಕೂ ಮೀರಿದ್ದು ಎಂದು ಹಿರಿಯರೊಬ್ಬರು ಹೇಳಿದ್ದಾರೆ. ಪ್ರೀತಿಯನ್ನು ಮುಂದೂಡುವುದರಿಂದ

ಜೀವನದಲ್ಲಿ ಬಹಳ ಯಶಸ್ಸನ್ನು ಸಾಧಿಸಬಹುದು. ಪ್ರೀತಿ-ವಿಶ್ವಾಸಗಳಿಂದ ಶತ್ರುವನ್ನು ಬೇಕಾದರೂ ಗೆಲ್ಲಬಹುದು ಪ್ರೀತಿ ಎಂಬುದು ಸ್ಪಷ್ಟವಾಗಿ ಒಬ್ಬರಿಂದೊಬ್ಬರಿಗೆ ತಲುಪಿಸಲು ಸಾಧ್ಯವಾದ ಸಾಧನ. ಪ್ರೀತಿಯ ಶಕ್ತಿ ಎಷ್ಟರದ್ದು ಎಂಬುದಕ್ಕೆ ಒಂದು ಉದಾಹರಣೆ: ಮಹಾರಾಷ್ಟ್ರದಲ್ಲಿ ಒಬ್ಬರು ಯುವಕ ತತ್ವಜ್ಞಾನಿ ಇದ್ದಾರೆ. ಅವರು ಪ್ರೀತಿ ಪ್ರಸಾರದಲ್ಲಿ ಎಷ್ಟರವಟ್ಟಿಗೆ ಯಶಸ್ವಿಯಾಗಿದ್ದಾರೆಂದರೆ, ಯೋಚಿಸಲಾಗದ್ದನ್ನೂ ಸಾಧಿಸಿದ್ದಾರೆ. ಅವರ ಮನೆಯ ಮುಂದೆ ಒಂದು ಕತ್ತಾಳಿ ಗಿಡ ಬೆಳೆಸಿದ್ದಾರೆ. ಕತ್ತಾಳಿ ಬರೀ ಮುಳ್ಳು ತುಂಬಿದ ಗಿಡ. ಆದರೆ ಈ ತತ್ವಜ್ಞಾನಿ ಬೆಳೆಸಿರುವ ಕತ್ತಾಳಿಯಲ್ಲಿ ಮುಳ್ಳೇ ಇಲ್ಲ. ಪ್ರತಿದಿನ ಕತ್ತಾಳಿಗೆ ನೀರೆರೆಯುವಾಗ ಅವರು ಪ್ರೀತಿಯಿಂದ, ನಿನ್ನ ಕುಡಿಕೆ ನನಗೆ ತುಂಬಾ ಇಷ್ಟ. ಆದರೆ ನೀನು ಮುಳ್ಳುಮಯ. ನಾನು ಅಪ್ಪಿಕೊಂಡರೆ ನನ್ನ ಕೈಯೆಲ್ಲಾ ನೋವಾಗುತ್ತದೆ, ಎಂದು ತಪ್ಪದೆ ಹೇಳುತ್ತಿದ್ದರಂತೆ. ಅವರ ಪ್ರೀತಿ ಆ ಪುಟ್ಟ ಹಸಿರಿಗೆ ತಲುಪಿತು. ಮುಂದೆ ಬೆಳೆದವುಗಳಿಗೆ ಮುಳ್ಳೇ ಇರಲಿಲ್ಲ. ಇದೇ ಸಾಧ್ಯವೆಂದ ಮೇಲೆ ಮನುಷ್ಯರಲ್ಲಿ ಪ್ರೀತಿಯ ಪ್ರಸಾರ ಇನ್ನೂ ಸುಲಭವೆಂದಾಯಿತಲ್ಲವೇ ?

ಎಲ್ಲವೂ ಇಲ್ಲಿ ಬರೆದಷ್ಟು, ನಾವಂದುಕೊಂಡು ಬಿಡುವಷ್ಟು ಸುಲಭವಲ್ಲದಿರಬಹುದು. ಆದರೆ ಒಂದಂತೂ ಖಂಡಿತವಾಗಿಯೂ ನಿಜ. ಕೆಲವಾರು ವ್ಯವಸ್ಥೆಗಳಿಂದ ಬದುಕಿನ ಬೇಸರವನ್ನು ಸ್ವಲ್ಪ ಮಟ್ಟಿಗಾದರೂ ಕಳೆದುಕೊಳ್ಳಬಹುದು ಯಾವ ಕೆಲಸ ಮಾಡಬೇಕಾದರೂ ಯೋಚನೆ, ತಾಳ್ಮೆ, ಸರಳತೆಗಳನ್ನು ಮುಂದಿಟ್ಟುಕೊಂಡರೆ ಸಾಧನೆ ಹತ್ತಿರವಾಗುತ್ತದೆ. ಅಂದುಕೊಂಡಿದ್ದೆಲ್ಲಾ ಮ್ಯಾಜಿಕ್‌ನಂತೆ ಆಗಿಬಿಡುವುದು ಅಸಾಧ್ಯ. ಆದರೆ ಪ್ರಯತ್ನ ಮಾಡುವುದರಲ್ಲಿ ಯಾವ ನಷ್ಟವೂ ಆಗುವುದಿಲ್ಲ. 'ಮರಳಿ ಯತ್ನವ ಮಾಡು, ಮರಳಿ ಯತ್ನವ ಮಾಡು, ಎಂಬಂತೆ ನಿರಂತರ ಪ್ರಯತ್ನದಿಂದ ಸಫಲತೆ ಕಾಣಬಹುದು. 'ಹೀಗಾಗಿಹೋಯಿತಲ್ಲಾ' ಎಂದು ಚಿಂತಿಸಿ ಕೊರಗುವುದಕ್ಕಿಂತಲೂ, 'ಆಗಿದ್ದಾಗಿಹೋಯಿತು, ಮುಂದೆ ಹೀಗಾಗುವುದು ಬೇಡ' ಎಂದು ತೀರ್ಮಾನಿಸಿಕೊಂಡು, ಹೃದಯ ಬರಿದಾಗಿಸಿಕೊಳ್ಳದೆ ಬದುಕನ್ನು ಹಸನಾಗಿಸಿಕೊಳ್ಳಬೇಕು. ಇವೆಲ್ಲಾ ಪ್ರಾರಂಭದಲ್ಲಿ ಬಹಳ ಕಷ್ಟದಂತೆ ಕಂಡರೂ, ಅನಂತರ ಸತತ ಅಭ್ಯಾಸದಿಂದ ನಮ್ಮ ಬದುಕಿನ ಒಂದು ಅವಿಭಾಜ್ಯ ಅಂಗವಾಗುತ್ತವೆ.

ಆಗ ಹುಟ್ಟು-ಸಾವುಗಳ ನಡುವಿನ ಅಂತರ ನಿಜವಾಗಿಯೂ ರಸಮಯವಾಗಬಲ್ಲದು. ಬದುಕು ಸುಲಭವಾಗಬಲ್ಲದು. ಜೀವನಕ್ಕೊಂದು ಅರ್ಥ ಬರಬಹುದು.

---

## ಶಿಕ್ಷಣ

**ವಿದ್ಯಾರ್ಥಿಯಲ್ಲಿರುವ ಶಕ್ತಿಯ ಸಂಪೂರ್ಣತೆಯನ್ನು ಹೊರಗೆಳೆಯುವುದೇ ಶಿಕ್ಷಣದ ಸಾರಸರ್ವಸ್ವ.**

—ಗಾಂಧೀಜಿ

**ಶಿಕ್ಷಣವೆಂದರೆ ಬರೀ ಓದಲ್ಲ, ಬರೀ ಪುಸ್ತಕ ಜ್ಞಾನವೂ ಅಲ್ಲ. ಅದು ಮಾನವೀಯತೆಯ ವಿಕಾಸ.**

—ವಿವೇಕಾನಂದ

**ಶಿಕ್ಷಣವೆಂದರೆ ಜನರಿಗೆ ತಿಳಿಯದುದನ್ನು ತಿಳಿಸಿಕೊಡುವುದಷ್ಟೇ ಅಲ್ಲ, ಜನರಿಗೆ ನಡವಳಿಕೆಯನ್ನು ಕಲಿಸುವ ಕಾರ್ಯ.**

—ರಸ್ಕಿನ್

# “ಅಳುವ ಕಂದನ ತುಟಿಯು……………”

—ಆರ್. ರಾಜಯ್ಯ

ಒಂದು ಜನಾಂಗದ ಸಂಸ್ಕೃತಿಯನ್ನು ಅರಿಯಬೇಕಾದರೆ ಅಲ್ಲಿನ ಸಾಹಿತ್ಯವನ್ನು ಗಮನಿಸಬೇಕಾಗುತ್ತದೆ. ಕಾರಣ ಜನತೆಯ ಅಂತರಂಗ ಜೀವನ ಸಾಹಿತ್ಯದಲ್ಲಿ ಬಿಂಬವಾಗುತ್ತದೆ. ನಮ್ಮ ಅಂತರಂಗ ಅರಿಯಲು ಜಾನಪದ ಸಾಹಿತ್ಯದ ಕಡೆಗೆ ಕಣ್ಣು ಹೊರಳಿಸಬೇಕಾಗುತ್ತದೆ. ಅಲ್ಲಿ ಜನಜೀವನದ ಉಸಿರಿನ ಸ್ಪಂದನ ಕಂಡುಬರುತ್ತದೆ. ಸಾಹಿತ್ಯ ಸಂಸ್ಕೃತಿಯ ಪರಿಚಯವಾಗುತ್ತದೆ.

“ ಜಾನಪದ ಸಾಹಿತ್ಯ ” ಅಜ್ಞಾತ ಕವಿಗಳಿಂದಲೇ ಸೃಷ್ಟಿಯಾದುದು. ಬಹುಮಟ್ಟಿಗೆ ಹೆಣ್ಣು ಮಕ್ಕಳಿಂದಲೇ ಸೃಷ್ಟಿಯಾದ ಈ ಜಾನಪದ ಕಾವ್ಯದಲ್ಲಿ ದೈನಂದಿನ ಸುಖ ದುಃಖಗಳ ರಮ್ಯ ನಿರೂಪಣೆಯಿದೆ. ನಿತ್ಯ ಜೀವನದಲ್ಲಿ ತಮ್ಮ ಮನಸ್ಸಿನ ಮೇಲೆ ಪರಿಣಾಮ ಬೀರಿದ ಒಂದೊಂದು ದೃಶ್ಯ, ಕೇಳಿದ ಯಾವುದೋ ಕತೆ, ಅವುಗಳಿಂದುಂಟಾದ ಅನುಭವ ಮುಂತಾದುವನ್ನೆಲ್ಲಾ ಜಾನಪದ ಕರ್ತೃಗಳು ಸಹಜ ಸುಂದರವಾಗಿ ಹಾಡುಗಳ ರೂಪದಲ್ಲಿ ಹಿಡಿದಿಟ್ಟಿದ್ದಾರೆ

ಮಕ್ಕಳು ಜೀವನದಲ್ಲಿ ವಹಿಸುವ ಪಾತ್ರ ಅದ್ಭುತವಾದುದು. ಮಕ್ಕಳು ಪತಿಪತ್ನಿಯರನ್ನು ಬಂಧಿಸುವ ಆನಂದದ ಗಂಟು. ಮಕ್ಕಳೆಂದರೆ “ ಎರಡು ಬಾಳನ್ನು ಬೆಸೆವ ಸೂತ್ರದಾರರು ”.

ಮಕ್ಕಳೆಂದರೆ ಬಾಳನಂದನವನದ ಮಂದಾರ ಕುಸುಮಗಳು. ವಿವಿಧ ವರ್ಣವೈಭವದಿಂದಲೂ ಸೌಳಭದಿಂದಲೂ ಹೂಗಳು ಹೇಗೆ ಉಲ್ಲಾಸದಾಯಕವೋ ಅಂತೆಯೇ ಮಕ್ಕಳು ನೋಡುವವರ ಕಣ್ಣಿಗೊಂದು ಹಬ್ಬ. ತಂದೆ ತಾಯಿಗಳಿಗಂತೂ ತಮ್ಮ ಮಕ್ಕಳು ಕೊಡುವ ಸಂತೋಷ ಅನುಪಮವಾದುದು, ದಾಂಪತ್ಯ ಜೀವನ ಸಾರ್ಥಕವಾಗಬೇಕಾದರೆ, ಪರಿಪೂರ್ಣವಾಗಬೇಕಾದರೆ ಸಂತಾನ ಲಾಭದಿಂದ. ಮಕ್ಕಳ ಬಾಲಲೀಲೆಗಳು, ಮೋಹಕವಾದ ನಗು, ಅಳು, ತೊದಲು ಮಾತು ಮುಂತಾದುವೆಲ್ಲ ಒಂದು ಸೋಜಿಗದ ಪ್ರಪಂಚ. ಇದಕ್ಕೆ ಮನಸೋಲದ ಮನುಷ್ಯರಿಲ್ಲ. ಇದನ್ನು ಬಣ್ಣಿಸದ ಕವಿಯಿಲ್ಲ.

ಬದುಕಿನ ಎಲ್ಲ ದಿಕ್ಕುಗಳಲ್ಲಿಯೂ ಕನ್ನಡಿ ಹಿಡಿದಿರುವ ಜನಪದ ಗೀತೆಗಳಲ್ಲಿ ಮಕ್ಕಳ ಚಿತ್ರಣ ಮನೋಜ್ಞವಾಗಿದೆ. ಮಕ್ಕಳ ಚರ್ಯೆಗಳನ್ನು ಅವರ ಬಗೆಗೆ ತಾಯಂದಿರ ಮನಸ್ಸಿನಲ್ಲಿ ಹುಟ್ಟುವ ಭಾವಗಳನ್ನು ನಿರೂಪಿಸುವ ಹಲವು ಉತ್ಕೃಷ್ಟವಾದ ಪದ್ಯಗಳು ಜನಪದ ಸಾಹಿತ್ಯದಲ್ಲಿ ವ್ಯಾಪಿಸಿವೆ.

ಬಂಜೆತನ ಹೆಣ್ಣಿನ ಪಾಲಿಗೆ ಅತ್ಯಂತ ದಾರುಣವಾದುದು. ಮಕ್ಕಳಿಲ್ಲದಿದ್ದರೆ ಅವಳ ಬಾಳು ವ್ಯರ್ಥ

ಬಾಲಕರಿಲ್ಲದ ಬಾಳಿದ್ಯಾತರ ಜನ್ಮ
ಬಾಡಿಗೆ ಎತ್ತು ದುಡಿದ್ಹಾಂಗ | ಬಾಳೆಲೆಯ
ಹಾಸ್ಯುಂಡು ಬೀಸಿ ಒಗೆದ್ಹಾಂಗ ||

ಕಂದನಾ ಕೊಡುಶಿವನೆ ಬಂಧನ ಪಡಲಾರೆ
ಹಂಗೀನ ಬೋನ ಉಣಲಾರೆ | ಮರ್ತ್ಯದಾಗ
ಬಂಜೆಂಬ ಶಬ್ದ ಹೊರಲಾರೆ ||

ಮಗು ತಾಯಿಯ ನಿಧಿಯಿದ್ದಂತೆ, ಮಗನೇ ಅವಳ ಸರ್ವಸ್ವ, ಕಣ್ಮಣಿ. ಹೆಣ್ಣಿನ ಹೃದಯದಲ್ಲಿ ಮಗುವಿಗೆ ಸಲ್ಲುವ ಸ್ಥಾನ ಎತ್ತರವಾದದು. ಇದರ ಬಗ್ಗೆ ಕೆಳಗಿನ ಸಾಲುಗಳಲ್ಲಿ ಅರಿಯಬಹುದು.

ತಾಯಿದ್ರೆ ತವರ್ಪ್ಹೆಚ್ಚು, ತಂದಿಪ್ರೆ ಬಳಗ್ಹೆಚ್ಚು
ಸಾವಿರಕ್ಕೆ ಹೆಚ್ಚು ಪತಿಪುರುಷ । ಹೊಟ್ಟೆಯ
ಮಾಣಿಕದ ಹರಳು ಮಗ ಹೆಚ್ಚು ॥

ತಾಯಿ ತನ್ನ ಕಂದನನ್ನು ವಾತ್ಸಲ್ಯ ಗಂಗೆಯಲ್ಲಿ ಮೀಯಿಸುತ್ತಾಳೆ. ಅಡಿಗಡಿಗೂ ಮಾತೃವಕ್ಷದ ರಕ್ಷೆ ಮಗುವಿಗೆ ಸಿದ್ಧವಾಗಿರುತ್ತದೆ. ತಾಯಿಯ ಪಾಲಿಗೆ ಮಗು "ಬಾಲ ಚಕ್ರವರ್ತಿ". ಈ ಮಕ್ಕಳ ಬಾಲ ಲೀಲೆ ಎಂತಹವರ ಮನಸ್ಸನ್ನೂ ಮುಗ್ಧರನ್ನಾಗಿ ಮಾಡುತ್ತದೆ.

ಅಳುವ ಕಂದನ ತುಟಿಯು ಹವಳದ ಕುಡಿಹಂಗೆ
ಕುಡಿಹುಬ್ಬು ಬೇವಿನೆಸಳ್ಹಂಗೆ । ಕಣ್ಣೋಟ
ಶಿವನ ಕೈಯಲಗು ಹೊಳದಂಗ ॥

ಕಂದಯ್ಯ ಅತ್ತರೆ ಕಣಗಿಲ ಕಾತಾವ
ಒಣಗಿದ್ದ ಬಾಳೆ ಚಿಗಿತಾವ । ಬಾಲನ
ಬರಡಾಕಳೆಲ್ಲಾ ಹಯನಾಗೆ. ॥

ತಾಯಿಗೆ ಮಕ್ಕಳೇ ಸರ್ವಸ್ವ. ಮಕ್ಕಳ ಅಳು, ನಗು ಚೆಲ್ಲಾಟ, ಓಡಾಟ, ಈ ಎಲ್ಲ ಬಗೆಯಲ್ಲೂ ವಾತ್ಸಲ್ಯಮಯಿಯಾದ ತಾಯಿ ಸಂತೋಷ ಪಡೆಯುತ್ತಾಳೆ.

ಈ ಜಾನಪದ ಗೀತೆಗಳು ಬರೀ ಬಾಲ ಲೀಲೆಗಳ ಬಗ್ಗೆ, ನೀತಿ, ನಿಷ್ಠೆಗಳ ಬಗ್ಗೆ ಕುರಿತೇ ಇಲ್ಲ. ಅದು ನಯ, ಮಾಧುರ್ಯ, ಸೌಂದರ್ಯಾಭಿರುಚಿಗಳ ಜೊತೆಗೆ ಬಾಳಿನಸವಿ, ಸಾರಗ್ರಾಹಿ ಮನೋಧರ್ಮ, ಸೌಂದರ್ಯೋಪಾಸನೆ, ರಸಿಕತೆ ಹಾಗೂ ಹಾಸ್ಯವನ್ನೂ ನೀಡುತ್ತದೆ. ( ಸಾಧಾರ ) —

## ಗಾದೆಗಳ ಗೀತೆಗಳು

†
ಆರಂಭದ ಆದಿಕಷ್ಟ
ವ್ಯಾಪಾರದ ಮೊದಲು ಕಷ್ಟ
ಸಂಸಾರದ ಮಧ್ಯೆಕಷ್ಟ
ಅಧಿಕಾರದ ಅಂತ್ಯ ಕಷ್ಟ

†
ನೆಂಟು ನೋಡದೆ ಹೋಯ್ತು
ಗಂಟು ಕೇಳದೇ ಹೋಯ್ತು
ಬದುಕು ಅಳದೇ ಹೋಯ್ತು
ಬಾಳು ನೋಡದೇ ಹೋಯ್ತು.


ಲೋಕ ಪ್ರಸಿದ್ಧಿಯಾದ
ಉತ್ತಮವಾದ
ಬಸವೇಶ್ವರ ಬ್ರಾಂಡ್
ಸೀಗೆಪುಡಿಯನ್ನೇ ಉಪಯೋಗಿಸಿರಿ

TRADE MARK
ರಜಿಸ್ಟರ್ಡ್
ನಂ. 276911

ತಯಾರಕರು :—
ಶ್ರೀಚನ್ನಬಸವೇಶ್ವರ ಸೋಪೆನಟ ವರ್ಕ್ಸ್
ಶಿವಾಜಿನಗರ, ತುಮಕೂರು.

ನಮ್ಮ ರೈತ

# ಅಂದು-ಇಂದು

—ಡಿ. ವೆಂಕಟರಾವ್, ಎಂ.ಎ.,

(ಮುಂದುವರಿದ ಲೇಖನ)

> ಇಲ್ಲಿಯವರೆಗೆ—..............
>
> ಬ್ರಿಟೀಷರ ಕಾಲದಲ್ಲಿ ರೈತರ ಜೀವನ ದುಸ್ಸಹನೀಯ ವಿದ್ದಿತು. ಶಿಕ್ಷಣಸೌಲಭ್ಯ, ವೈದ್ಯಕೀಯ ನೆರವನ್ನೇ ಕಾಣದ ಬಡ ರೈತನ ಮಕ್ಕಳೂ ಸಹ ತಂದೆ ತಾಯಿಗಳೊಡನೆ ಬಿಸಿಲಿನಲ್ಲಿ ದುಡಿದು ಹೆಣಗುವ ಪರಿಸ್ಥಿತಿ ಯಿದ್ದಿತು. ಇಷ್ಟಾದರೂ ರೈತನ ಅಲ್ಪಾದಾಯದ ಬಹುಪಾಲು ಭೂಮಾಲೀಕನ ಸ್ವತ್ತಾಗಿ ಕಡೆಗೆ ಅವನ ಮಾಸಿಕ ಆದಾಯ ಕೇವಲ ತಲಾ 5ರೂ. ಗಳಿದ್ದಿತು.
>
> .......................—ಇನ್ನು ಮುಂದೆ ಓದಿ

ಇಷ್ಟು ಅಲ್ಪ ಮೊತ್ತದಲ್ಲಿ ಯಾವ ಮನುಷ್ಯ ತಾನೇ ಜೀವಿಸಲು ಸಾಧ್ಯ.? ಹೀಗೆ ರೈತರಿಗೆ ಅಂದಿನ ಸಾಲದ ಏಕೈಕ ಮೂಲವಾಗಿದ್ದ ಹಳ್ಳಿಯ ಸಾಹುಕಾರರ ಮೊರೆ ಹೋಗದೆ ಗತ್ಯಂತರವೇ ಇರಲಿಲ್ಲ. ಆದರೆ ಹೆಚ್ಚಿನ ಬಡ್ಡಿಗೆ ಸಾಲ ಪಡೆದ ರೈತರು ಅದನ್ನು ಹಿಂತಿರುಗಿಸಲು ಅಸಮರ್ಥರಾಗಿ, ಕ್ರಮೇಣ ತಮ್ಮ ಜೀವನಾಧಾರವಾದ ಭೂಮಿಯನ್ನೇ ಸಾಹುಕಾರರ ವಶಕ್ಕೆ ಕೊಡಬೇಕಾಗುತ್ತಿತ್ತು. ಹೀಗೆ ಸಾವಿರಾರು ಜನರು ಭೂಮಿಯನ್ನು ಕಳೆದುಕೊಂಡು ನಿರ್ಗತಿಕರಾಗಬೇಕಾದ ಪರಿಸ್ಥಿತಿಯು ತಾನಾಗಿ ಒದಗುತ್ತಿತ್ತು. ಇಲ್ಲವೇ ಸಾಯುವವರೆಗೂ ಅವರ ಬಳಿ ಜೀತದ ಆಳುಗಳಾಗಿ ದುಡಿಯಬೇಕಾಗಿತ್ತು. ಹೀಗೆ ರೈತರು ಸಾಲದಲ್ಲಿಯೇ ಹುಟ್ಟಿ, ಸಾಲದಲ್ಲಿಯೇ ಬೆಳೆದು, ಸಾಲದಲ್ಲಿಯೇ ಸಾಯುತ್ತಿದ್ದುದು ಆಗ ಬಹು ಸಾಧಾರಣ ವಿಷಯವಾಗಿತ್ತು. ಸಾಲಕ್ಕೂ ಬಡತನಕ್ಕೂ ಒಂದು ವಿಶೇಷವಾದ ಸಂಬಂಧವಿದೆ. ಸಾಲದ ಕಾರಣ ಬಡತನ ವಾದರೆ ಬಡತನದ ಫಲವೇ ಸಾಲ. ಈ ವಿಷಮ ಚಕ್ರದಲ್ಲಿ ಸಿಲುಕಿ ರೈತರು ಬಾಳಿನಲ್ಲಿ ಸುಖ ನೆಮ್ಮದಿಗಳನ್ನು ಕಳೆದುಕೊಂಡು ಬವಣೆಯ ಹೊಡೆತಗಳನ್ನು ತಾಳಲಾರದೆ ಜರ್ಝರಿತರಾಗುತ್ತಿದ್ದರು. ಆಗಿನ ಕೃಷಿಯ ಹೀನಸ್ಥಿತಿ, ರೈತರು ಹೊಟ್ಟೆಗಿಲ್ಲದೆ ಅನೇಕ ರೋಗರುಜಿನಗಳಿಂದ ನರಳುತ್ತಿದ್ದುದು, ವಿವಾದದ ವೇಳೆಯಲ್ಲಿ ಉಪ ಕಸುಬುಗಳಿಲ್ಲದಿದ್ದುದು, ಕಾಲಕ್ಕೆ ಸರಿಯಾಗಿ ಮಳೆ ಬೆಳೆಗಳು ಆಗದಿದ್ದುದು, ಕೃಷಿಗೆ ಅವಶ್ಯವಾಗಿರುವ ದನ ಕರುಗಳಿಗೆ ಸರಿಯಾದ ಮೇವಿಲ್ಲದೆ ರೋಗಗಳಿಗೆ ತುತ್ತಾಗುತ್ತಿದ್ದುದು, ರೈತನ ಬಳಿ ಸಾಮಗ್ರಿಗಳನ್ನು ಕೊಳ್ಳಲು ಹಣವಿಲ್ಲದಿದ್ದುದು, ಇದರ ಜೊತೆಗೆ ಇನ್ನೂ ಅನೇಕ ಕಾರಣಗಳು ರೈತರ ಸಾಲದ ಹೊರೆಗೆ ಮೂಲವಾಗಿದ್ದು ಸಾಹುಕಾರರ ಗುಲಾಮರನ್ನಾಗಿ ಮಾಡುತ್ತಿದ್ದುವು. ಬ್ರಿಟಿಷರ ಆಳ್ವಿಕೆಗೆ ಮೊದಲು-ಗ್ರಾಮಗಳಲ್ಲಿದ್ದ ಹಿರಿಯರೇ ರೈತರ ವ್ಯವಹಾರಗಳನ್ನು ತೀರ್ಮಾನ ಮಾಡಿಬಿಡುತ್ತಿದ್ದುದರಿಂದ, ಸಾಹುಕಾರರು ತಮ್ಮ ಇಚ್ಛೆಗನುಸಾರವಾಗಿ ನಡೆಯಲು ಅವಕಾಶವಿರಲಿಲ್ಲ. ಆದರೆ ಬ್ರಿಟಿಷರ ಆಳ್ವಿಕೆಯು ನಮ್ಮ ದೇಶದಲ್ಲಿ ಪ್ರಾರಂಭಗೊಂಡಮೇಲೆ ಗ್ರಾಮಗಳಲ್ಲಿದ್ದ ಶಿಸ್ತು, ಸಂಯಮಗಳು ಸಡಿಲಗೊಂಡು ನ್ಯಾಯ ತೀರ್ಮಾನಕ್ಕೆ ಸಿವಿಲ್ ಕೋರ್ಟುಗಳು ಹುಟ್ಟಿಕೊಂಡವು. ಅದರೊಂದಿಗೇ ಹಲವಾರು ಕಾನೂನುಗಳು ಜಾರಿಗೆ ಬಂದವು. ಆಗಿನ ಅಧಿಕಾರಿಗಳಿಗೆ ಗ್ರಾಮಗಳ ವಿದ್ಯಮಾನಗಳೊಂದೂ ತಿಳಿಯುತ್ತಿರಲಿಲ್ಲ. ಅವರು ಕಾನೂನಿನ ಪ್ರಕಾರ ವ್ಯವಹಾರಗಳನ್ನು ತೀರ್ಮಾನ ಮಾಡುತ್ತಿದ್ದರು. ಇದರಿಂದ ಸಾಹುಕಾರರ ವ್ಯವಹಾರಕ್ಕೆ ನಿರಾತಂಕವಾಗಿ ಅವರ ಸ್ವೇಚ್ಛಾ ಪ್ರವರ್ತನೆ ಪ್ರಾರಂಭವಾಯಿತು. ಅವರು ರೈತರಿಂದ ಚಕ್ರ ಬಡ್ಡಿಯನ್ನು ವಸೂಲು ಮಾಡುತ್ತಿದ್ದುದರ ಜೊತೆಗೆ ಅವರ ಆಸ್ತಿಪಾಸ್ತಿಗಳನ್ನು ತಮ್ಮ ಬಾಕಿಗೆ ಈಡಾಗಿ ತೆಗೆದುಕೊಳ್ಳಲಾರಂಭಿಸಿದರು. ರೈತರಿಗೆ ಅನ್ಯಾಯವಾಗಿ ಬಡ್ಡಿ ಹಾಕಿ, ಅವರಿಂದ ಆಸ್ತಿಪಾಸ್ತಿಗಳನ್ನು ಕಸಿದುಕೊಳ್ಳುವ ಪದ್ಧತಿಯನ್ನ ತಪ್ಪಿಸಬೇಕೆಂಬ ಉದ್ದೇಶದಿಂದ ಬ್ರಿಟಿಷ್ ಸರ್ಕಾರವು 1879ರಲ್ಲಿ ಡೆಕನ್ ಅಗ್ರಿಕಲ್ಚರಿಸ್ಟ್ಸ ರಲೀಫ್ ಆಕ್ಟ್ [ Deccan

Agriculturist relief Act ] ಎಂಬ ಕಾನೂನನ್ನು 1918 ರಲ್ಲಿ ಯುಷರೀಸ್ ಲೋನ್ಸ್ ಆಕ್ಟ್ ( Usuries loan Act ) ಎಂಬ ಕಾನೂನನ್ನು ಜಾರಿಗೆ ತಂದಿತು. ಆದರೆ ಇದರಿಂದ ಏನೂ ಉಪಯೋಗವಾಗಲಿಲ್ಲ. 1883 ಮತ್ತು 1884 ರಲ್ಲಿ ಬ್ರಿಟಿಷ್ ಸರಕಾರವು ರೈತರಿಗೆ ಅಲ್ಪಾವಧಿ ಮತ್ತು ಧೀರ್ಘಾವಧಿ ಸಾಲಗಳನ್ನು ಕೊಡುವ ಕಾಯಿದೆಯನ್ನು ಪಾಸುಮಾಡಿತು. ಜೊತೆಗೆ ಹಣದ ಅಗತ್ಯವುಳ್ಳ ರೈತರಿಗೆ ಸಾಲದ ಸೌಲಭ್ಯವನ್ನು ಒದಗಿಸಲು ಸಹಕಾರಿ ಸಂಸ್ಥೆಗಳನ್ನು ಸ್ಥಾಪಿಸಿತು. ಆದರೆ ಇದಾವುದರಲ್ಲೂ ಹೆಚ್ಚಿನ ಪ್ರಗತಿಯಾಗದೆ, ರೈತರ ಸ್ಥಿತಿಗತಿಗಳಲ್ಲಿ ಯಾವ ಬದಲಾವಣೆಯೂ ಆಗಲಿಲ್ಲ. ದಿನೇ ದಿನೇ ಸಾಹುಕಾರರ ಪ್ರಾಮುಖ್ಯತೆಯು ಹೆಚ್ಚಲಾರಂಭಿಸಿತೇ ಹೊರತು ಕುಗ್ಗಲಿಲ್ಲ. ರೈತರ ತಿಳಿಗೇಡಿತನ ಅವಿವೇಕ, ಮೂಢನಂಬಿಕೆಗಳ ಮರುಭೂಮಿಯಲ್ಲಿ ಸಾಹುಕಾರರು ಜಲಾಶಯಗಳಾಗಿ ಪರಿಣಮಿಸಿದರು. ಬಡರೈತರು ಸಾಲದಲ್ಲಿ ಮುಳುಗಿ, ಅದರ ಹೊರೆಯನ್ನು ತಾಳಲಾರದೆ ತಮ್ಮ ಸರ್ವಸ್ವವನ್ನು ಸಾಹುಕಾರರ ಪಾಲುಮಾಡಿ ತಬ್ಬಲಿಗಳಾಗುತ್ತಿದ್ದರು. ಹೀಗೆ ಸತತವಾಗಿ ಬ್ರಿಟಿಷರ ಆಳ್ವಿಕೆಯಲ್ಲಿ ಬಡರೈತರೂ ಸೊರಗಿದನಂತರ ಭಗವಂತನು ಅವರ ಗೋಳನ್ನು ಕಣ್ತೆರೆದು ನೋಡಿದನೋ ಎಂಬಂತೆ, ನಮ್ಮ ಭಾರತೀಯರು ದಿಟ್ಟತನದಿಂದ, ದೀರ್ಘ ಕಾಲದವರೆಗೆ ನಡೆಸಿದ ಹೋರಾಟಕ್ಕೆ ಫಲವಾಗಿ ಕೊನೆಗೂ 1947 ಆಗಸ್ಟ್ 15 ಕ್ಕೆ ನಮ್ಮ ದೇಶ ಸ್ವಾತಂತ್ರ್ಯಯುಗದೊಳಕ್ಕೆ ಕಾಲಿಟ್ಟು ಜಯಮಾಲೆ ಧರಿಸಿತು.

**ರೈತ ಸ್ವಾತಂತ್ರ್ಯಾನಂತರ :**

ನಮ್ಮ ದೇಶಕ್ಕೆ ಸ್ವಾತಂತ್ರ್ಯ ದೊರೆತಾಗ, ರೈತರು ಸದ್ಯ ! ಬ್ರಿಟಿಷರ ಯಮಹಿಡಿತದಿಂದ ಪಾರಾದೆವಲ್ಲಾ ಎಂದು ಕ್ಷಣಿಕವಾದ ಸಂತೋಷದ ಅನುಭವವನ್ನು ಪಡೆಯಬೇಕಾಗಿತ್ತೇ ಹೊರತು ಆಗಿನ ಅವರ ಬದುಕು ತೀರ ದುರ್ಭರಸ್ಥಿತಿಯತ್ತ ವಾಲಿತ್ತು. ಈ ಗಂಡಾಂತರ ಪರಿಸ್ಥಿತಿಯಿಂದ ಪಾರಾಗುವುದು ಸುಲಭದ ಮಾತಾಗಿರಲಿಲ್ಲ. ಸ್ವಾತಂತ್ರ್ಯ ದೊರೆತ ಸಂದರ್ಭದಲ್ಲಿ ಎಲ್ಲಾ ಕ್ಷೇತ್ರಗಳಲ್ಲೂ ಪರಿಸ್ಥಿತಿ ತೀರ ಹದಗೆಟ್ಟಿತ್ತು. ಅರಾಜಕತೆ ತೊಲಗಿ, ಎಲ್ಲೆಲ್ಲೂ ಶಾಂತಿಯು ನೆಲಸಿದ್ದುದೇನೋ ನಿಜ. ಆದರೆ ಭವಿಷ್ಯದ ಅನಿಶ್ಚಿತತೆಯೂ ಅಷ್ಟೇ ಮಟ್ಟದಲ್ಲಿ ತುಂಬಿತ್ತು. ಆಹಾರವಿಲ್ಲದೆ ಹಸಿದ ಹೊಟ್ಟೆಯಲ್ಲಿ ಗೋಳಾಡುತ್ತಿರುವ ಲಕ್ಷಗಟ್ಟಲೆ ಜನ, ನೀರಿಗಾಗಿ ಬಾಯಾರಿ ಬಿರುಕು ಬಿಟ್ಟ ಗದ್ದೆಗಳು, ಅಸ್ತವ್ಯಸ್ತಗೊಂಡ ಸಾರಿಗೆ ಸಂಪರ್ಕಗಳು, ಹರಕು-ಮುರುಕು ಉಪಕರಣಗಳಿಂದ ತುಂಬಿದ ಹಳೆಯ ಕೈಗಾರಿಕೆಗಳು, ಪಾಕಿಸ್ತಾನದಿಂದ ವಲಸೆ ಬಂದ ಲಕ್ಷಗಟ್ಟಲೆ ನಿರಾಶ್ರಿತ ಜನ-ಹೀಗೆ ಸಮಸ್ಯೆಗಳು ಸರಪಳಿಯಂತೆ ಹೆಣೆದುಕೊಂಡು ಬೃಹದಾಕಾರವಾಗಿ ನಿಂತಿದ್ದುವು. ಆರ್ಥಿಕ ಜಡತ್ವ ಎಲ್ಲೆಲ್ಲೂ ವಿಜೃಂಭಿಸುತ್ತಿತ್ತು. ಬಡರೈತರ ಗೋಳಂತೂ ಕಲ್ಲನ್ನು ಕರಗಿಸುವಂತಿತ್ತು. ರಾಜಕೀಯ ಸ್ವಾತಂತ್ರ್ಯವೇನೋ ದೊರೆಯಿತು. ಆದರೆ ಆರ್ಥಿಕ ಸ್ವಾತಂತ್ರ್ಯವಿಲ್ಲದೆ ಬರಿಯ ರಾಜಕೀಯ ಸ್ವಾತಂತ್ರ್ಯದಲ್ಲಿ ಯಾವ ಅರ್ಥವಿದೆ. ? ರಾಷ್ಟ್ರದ ಹಾಗೂ ಬಡ ಜನತೆಯ ಉದ್ಧಾರವಾಗಬೇಕಾದರೆ ಆರ್ಥಿಕ ಸ್ವಾತಂತ್ರ್ಯ ಇರಲೇ ಬೇಕು. ಇದು ನಮ್ಮ ನಾಯಕರಿಗೆ ಮನವರಿಕೆಯಾಗಿ, ಸ್ವಾತಂತ್ರ್ಯದ ಬೆನ್ನ ಹಿಂದೆಯೇ, ಹಿಂಬಾಲಿಸಿದ ಸಮಸ್ಯೆಗಳು ಸ್ವಲ್ಪಮಟ್ಟಿಗೆ ಹತೋಟಿಗೆ ಬರುತ್ತಿದ್ದಂತೆಯೇ, 1951 ರಲ್ಲಿ ರಾಷ್ಟ್ರದ ಆರ್ಥಿಕ ಪುನರ್‌ನಿರ್ಮಾಣ ಮತ್ತು ಏಳಿಗೆಗಾಗಿ ಯೋಜನೆಗಳನ್ನು ತಯಾರು ಮಾಡಿ ಕಾರ್ಯರೂಪಕ್ಕೆ ತರುವ ಕೆಲಸವನ್ನು ಕೈಗೊಳ್ಳಲಾಯಿತು. ಅನೇಕ ಶತಮಾನಗಳಿಂದ ಬೇರೂರಿದ್ದ ಜನರಲ್ಲಿ ಅದರಲ್ಲೂ ಬಡ ರೈತರ ದಾರಿದ್ರ್ಯ, ಅಜ್ಞಾನ, ರೋಗರುಜಿನಗಳು, ಹಸಿವು-ಇವುಗಳ ಹಾವಳಿಗಳನ್ನು ನಿರ್ಮೂಲ ಮಾಡುವುದು ಬೆಟ್ಟವನ್ನು ಎತ್ತಿದಷ್ಟೇ ಪ್ರಯಾಸದ ಕೆಲಸ. ಸಾಧಿಸಬೇಕಾಗಿದ್ದ ಕೆಲಸ ಅಗಾಧ, ನಮ್ಮಲ್ಲಿದ್ದ ಸಾಧನ ಸಾಮಗ್ರಿಗಳು ಮಾತ್ರ ಅತ್ಯಲ್ಪ. ಇಂತಹ ಸ್ಥಿತಿಯಲ್ಲಿ ಯೋಜನೆಗಳನ್ನು ರೂಪಿಸಿ ಕಾರ್ಯರೂಪಕ್ಕೆ ತರುವುದು ನಭೋಮಂಡಲದೊಳಕ್ಕೆ ಕೃತಕ ಗ್ರಹಗಳನ್ನು ಕಳುಹಿಸು

ವಂತೆ ಎನ್ನಬಹುದು. ಆದರೂ ಭಾರತ ದಿಟ್ಟ ಹೆಜ್ಜೆ ಇಟ್ಟು, ಸುಖ-ಸಮೃದ್ಧಿಗಳ ನಾಡಾಗುವ ಕನಸನ್ನು ಹೊಂದಿ ಯೋಜನೆಗಳ ಹಾದಿಯಲ್ಲಿ ಸಾಗಲಾರಂಭಿಸಿತು.

ನಮ್ಮ ನಲ್ಮೆಯ ನಾಡಿಗೆ ಸ್ವಾತಂತ್ರ್ಯ ದೊರೆತು ಇಂದಿಗೆ 28 ವರ್ಷಗಳು ಕಳೆದಿವೆ. ಹಲವಾರು ದಶಕಗಳು ಬ್ರಿಟೀಷರ ಕ್ರೂರ ದಬ್ಬಾಳಿಕೆಯ ವಿರುದ್ಧ ಅವಿರತವಾಗಿ ಹೋರಾಟ ನಡೆಸಿ ಅವರ ದಾಸ್ಯದಿಂದ ವಿಮುಕ್ತಿಹೊಂದಿ, ದೀರ್ಘ ಮಂಪರಿನಿಂದ ಎಚ್ಚೆತ್ತ ಭಾರತ ಇಂದು ಆರ್ಥಿಕ ಸ್ವಾತಂತ್ರ್ಯದ ಜೊತೆಗೆ ಸಾಮಾಜಿಕ ಹಾಗೂ ನೈತಿಕ ಸ್ವಾತಂತ್ರ್ಯಗಳನ್ನು ಗಳಿಸಿ ಪ್ರಗತಿಯ ಉತ್ತುಂಗ ಶಿಖರವನ್ನು ಏರುವ ಗುರಿಯಿಂದ ಸಮಾನತಾ ಧ್ಯೇಯ ಸಾಧನೆಗೆ ಸಿದ್ಧಾಂತಪಥದಂತಿರುವ ಪಂಚವಾರ್ಷಿಕ ಯೋಜನೆಗಳನ್ನು ಕಾರ್ಯರೂಪಕ್ಕೆ ತಂದು ಅವುಗಳ ತಣ್ಣೆಳಲಿನಲ್ಲಿ ಬಾಳಲು ಯತ್ನಿಸುತ್ತಿದೆ. ಸ್ವಾತಂತ್ರ್ಯಕ್ಕೆ ಮೊದಲು ಇದ್ದ ಆರ್ಥಿಕ ಜಡತೆ, ಅಡ್ಡಿ ಆತಂಕಗಳು ಇಂದು ದೂರವಾಗಿವೆ. ಈಗಾಗಲೇ ನಾವು ನಾಲ್ಕು ಪಂಚವಾರ್ಷಿಕ ಯೋಜನೆಗಳನ್ನು, ಮುಗಿಸಿ ಐದನೆಯ ಯೋಜನೆಯಲ್ಲಿ ಕಾಲಿಟ್ಟಿದ್ದೇವೆ. ಈ ದಿಸೆಯಲ್ಲಿ ನಮ್ಮ ಇಂದಿನ ರೈತರ ಸಮಸ್ಯೆಗಳೇನು ? ಯೋಜನೆಗಳಿಂದ ಅವರು ಎಷ್ಟರಮಟ್ಟಿಗೆ ಪ್ರಯೋಜನಗಳನ್ನು ಪಡೆದಿದ್ದಾರೆ ಎಂಬುದನ್ನು ಈಗ ವಿವೇಚಿಸೋಣ. [ ಮುಂದುವರಿಯುವುದು ]

---

ಪ್ರಪಂಚದಲ್ಲಿ ಮೂರು ವರ್ಗದ ಜನರಿದ್ದಾರೆ. ತಮ್ಮ ಸ್ವಂತ ಅನುಭವದಿಂದ ಪಾಠ ಕಲಿಯತಕ್ಕವರು— ಅವರು ಬುದ್ಧಿವಂತರು; ಇನ್ನೊಬ್ಬರ ಅನುಭವದಿಂದ ಕಲಿಯತಕ್ಕವರು- ಅವರು ಸುಖಿಗಳು; ಸ್ವಂತ ಬುದ್ಧಿಯು ಇಲ್ಲದೆ, ಇನ್ನೊಬ್ಬರ ಅನುಭವದಿಂದಲೂ ಕಲಿಯದವರು— ಅವರು ಮೂರ್ಖರು.

---

[ 10 ನೇ ಪುಟದಿಂದ ]

❀ **ಜಗಜ್ಯೋತಿ ಬಸವೇಶ್ವರ** ❀

ಯನ್ನು ಧ್ವನಿಸಲು ಇದೊಂದು ವಚನವೇ ಸಾಕಾದೀತು

ಎನ್ನ ಕಾಯವ ಸೋರೆಯ ಮಾಡಯ್ಯ.
ಎನ್ನ ಬೆರಳ ತಂತಿಯ ಮಾಡಯ್ಯ.
ಬತ್ತೀಸರಾಗವ ಉರದೊಲೊತ್ತಿ ಬಾರಿಸಯ್ಯ.

ಬುದ್ಧನ ನಂತರ ಗಾಂಧೀಜಿಯವರೆಗೆ, ಬಸವಣ್ಣನವರಂತೆ ಇಂಥಹ ಸರ್ವೋದಯ ಪ್ರಯತ್ನವನ್ನು ಇಷ್ಟೊಂದು ವಿಸ್ತಾರವಾಗಿ ಮಾಡಿದವರು ಈ ಭರತಭೂಮಿಯಲ್ಲೇ ಇಲ್ಲವೆಂದು ಹೇಳಬಹುದು. ಅವರು ರಚಿಸಿದ ಈ ನವಸಮಾಜ ಸುಧೀರ್ಘವಾದ ಧಾರ್ಮಿಕ, ಸಾಂಸ್ಕೃತಿಕ, ಸಾಮಾಜಿಕ ಪರಂಪರೆ, ವಿಶ್ವಮಾನ್ಯ ವಿಶ್ವವಂದ್ಯವಾಗಿದೆ. ಅವರು ಸ್ಥಾಪಿಸಿದ ಈ ನೂತನ ಸಮಾಜದಲ್ಲಿ, ಉಚ್ಚ ನೀಚ ಕುಲವೆಂಬ ಬಡವ ಬಲ್ಲಿದ ವರ್ಗವೆಂಬ, ಸ್ತ್ರೀ ಪುರುಷರೆಂಬ ಭೇದ ಭಾವಗಳಾವುವೂ ಇಲ್ಲ, ಸದಾಚಾರ, ಸವಿನಯ, ಅಂತರಂಗ-ಬಹಿರಂಗ ಶುದ್ಧಿಯ, ಕಾಯಕತ್ವ ಹಕ್ಕುಗಳನ್ನೊಳಗೊಂಡ ಸಹಬಾಳ್ವೆ, ಶುದ್ಧೀಕರಣ, ಪ್ರಾಮಾಣಿಕತೆ ಸತ್ಯ ನ್ಯಾಯಗಳ ಕರ್ತವ್ಯವನ್ನು ಹೊಂದಿರುವ ಧಾರ್ಮಿಕ, ಸಾಮಾಜಿಕ ಪ್ರಜಾಪ್ರಭುತ್ವವನ್ನೇ ಬಸವಣ್ಣನವರು ಸೃಷ್ಟಿಸಿದರು. ಬುದ್ಧನ ನಂತರ ಕಲುಷಿತಗೊಂಡ ನಮ್ಮ ಧಾರ್ಮಿಕ, ರಾಜಕೀಯ, ಸಾಮಾಜಿಕ ಮೌಲ್ಯಗಳಿಗೆ ಬಸವಣ್ಣನವರು, ತ್ರಿಕರಣಶುದ್ಧಿ ಸ್ವರ್ಗಮರ್ತ್ಯಗಳ ಸಾಮರಸ್ಯ, ಇಹ-ಪರಗಳ ಸಮ್ಮಿಲನಗಳ ಚಿನ್ನದಮೆರುಗನ್ನು ನೀಡಿ ಪುನಃಶ್ಚೇತನಗೊಳಿಸಿದ್ದಾರೆ. ತಮ್ಮ ಅನುಭಾವದ ಮೂಸೆಯಿಂದ ಸಾರ್ವಕಾಲಿಕ ಜಗತ್ಪ್ರಂದ್ಯ ನೀತಿಯನ್ನು ಕನ್ನಡ ಭಾಷಾಮಾಧ್ಯಮದಲ್ಲಿ ಬೋಧಿಸಿ ಕರ್ನಾಟಕ ಹಾಗೂ ಕನ್ನಡ ರಾಜ್ಯಕ್ಕೆ ಆಚಂದ್ರಾರ್ಕ ಯಶಸ್ಸನ್ನು ತಂದು ಕೊಟ್ಟರು. ಬಸವಣ್ಣನವರು ಮಾನವೀಯತೆಗೆ ಅಗ್ರಮಾನ್ಯ ಪದವಿಯನ್ನಿತ್ತು ಧರ್ಮದ ಹೆಸರಿನಲ್ಲಿ ನಡೆಯುತ್ತಿದ್ದ ಅಧರ್ಮ, ಅನಾಚಾರ, ಅನ್ಯಾಯಗಳಿಗೆ ಕೊಡಲಿ ಪೆಟ್ಟನ್ನಿತ್ತು, ಸಾಂದ ತತ್ವ ಎಂದಿಗೂ ಜಗಜ್ಯೋತಿಯಾಗಿರುತ್ತದೆ. ಆದುದರಿಂದಲೇ ಅವರು ಜಗಜ್ಯೋತಿ ಬಸವೇಶ್ವರರಾದರು. —

# ನಿಮ್ಮ ಭವಿಷ್ಯ — (ದಿನಾಂಕ 29-4-76 ರಿಂದ 29-5-76 ರ ವರೆಗೆ)

—ಜ್ಯೋ. ವಿ. ಎನ್.ವಿ. ಚೆನ್ನವೀರಶಾಸ್ತ್ರಿ

---

**ಮೇಷ**— ೧ ನೇ ಗುರು- ಸರಕಾರಿ ಸೌಲಭ್ಯ. ಸ್ತ್ರೀ ಕಲಹ. ವ್ಯಾಸಂಗ ಮಧ್ಯಮ. ಅನಾರೋಗ್ಯ. ೪ನೇ ಶನಿ-ಕಾರ್ಯಹಾನಿ. ಮಾರ್ಗಾಯಾಸ. ಸ್ಥಾನ ಭ್ರಷ್ಟತೆ ಅಶಾಂತಿ

**ವೃಷಭ**— ೧೨ ನೇ ಗುರು. ಆರ್ಥಿಕ ಮುಗ್ಗಟ್ಟು. ದಣಿಗಳ ಕೋಪ, ನಿರಾಶೆ, ಖರ್ಚು. ೩ ನೇ ಶನಿ ಭ್ರಾತೃದುಃಖ. ಭೂಮಿ ವ್ಯವಹಾರ. ಜಾಮೀನು. ಮಧ್ಯಮ ಫಲ.

**ಮಿಥುನ**— ೧೧ ನೇ ಗುರು- ಆರ್ಥಿಕ ಉತ್ತಮ. ಉದ್ಯೋಗ ವ್ಯಾಪಾರ ಉತ್ತಮ. ಮಿತ್ರ ಪ್ರೇಮ. ೨ ನೇ ಶನಿ- ಕುಟುಂಬ ಚಿಂತೆ. ಖರ್ಚು ಅಧಿಕ. ಆಪಾದನೆ, ನಷ್ಟ, ಅಧಿಕ ವಿಘ್ನ.

**ಕರ್ಕ**— ೧೦ ನೇ ಗುರು- ಆಹ್ವಾನ, ಪ್ರಯಾಣ. ಕಾರ್ಯಾನುಕೂಲ. ದಣಿ ಮೆಚ್ಚುಗೆ. ವಿಶೇಷ ವಾರ್ತೆ. ೧ನೇ ಶನಿ- ಅನಾರೋಗ್ಯ, ಅಪಾಯ. ಆಪಾದನೆ, ಋಣ, ಕುತಂತ್ರಕ್ಕೆ ಗುರಿ.

**ಸಿಂಹ**— ೯ನೇ ಗುರು- ಕಾರ್ಯಾನುಕೂಲ, ಧರ್ಮ ಕಾರ್ಯ. ಧೈರ್ಯ, ವ್ಯಾಪಾರ ಉದ್ಯೋಗ ೧೨ನೇ ಶನಿ- ಸರಕಾರಮೂಲಕ ಖರ್ಚು. ಸಾಲ, ಮಾರ್ಗಾಯಾಸ, ಮಾರ್ಪಾಟು.

**ಕನ್ಯಾ**— ೮ನೇ ಗುರು- ಅಪಘಾತ, ಆಜ್ಞೆ, ರಾಜ ಕೋಪ, ಆರ್ಥಿಕದುಬ್ಬರ, ಅಸಹನೆ. ೧೧ ನೇ ಶನಿ- ಭೂಮಿ, ವಾಹನ, ಉದ್ಯೋಗ, ವ್ಯಾಸಂಗ, ವ್ಯಾಪಾರ ಸಾಧಾರಣ.

**ತುಲಾ**— ೭ನೇ ಗುರು- ಪ್ರಯಾಣ, ಕುಟುಂಬ ಸುಖ ಸನ್ಮಾನ, ಕಾರ್ಯ ಜಯ, ಧನಾಗಮ. ೧೦ ನೇ ಶನಿ- ಕುತಂತ್ರಗಳಿಂದ ನೋವು. ಸ್ವಪ್ರಯತ್ನಕ್ಕೆ ವಿಘ್ನ, ನಿರಾಶೆ, ಖರ್ಚು.

**ವೃಶ್ಚಿಕ**— ೬ನೇ ಗುರು- ವ್ಯಾಸಂಗ, ವ್ಯಾಪಾರ, ಉದ್ಯೋಗ ಇವು ಉತ್ತಮ. ಆರ್ಥಿಕ ಮೇಲು. ೯ನೇ ಶನಿ- ಪಿತೃ ಚಿಂತೆ, ಸಾಲ, ಮಾರ್ಗಾಯಾಸ ಕೋಪ, ಮಾರ್ಪಾಟುಗಳು.

**ಧನಸ್ಸು**— ೫ನೇ ಗುರು- ಮೂಲ ಧನ, ಕುಟುಂಬ ಕ್ಷೇಮ, ಕಾರ್ಯಾನುಕೂಲ, ಸ್ವಾಗತ. ೮ನೇ ಶನಿ ಅನಾರೋಗ್ಯ, ಅಪಾಯ, ಅಪವಾದ, ಕಲಹ, ವ್ಯಾಸಂಗ ವಿಘ್ನ.

**ಮಕರ**— ೪ನೇ ಗುರು- ಗೃಹಸುಖ, ಕಾಗದ ಪತ್ರ, ಧನ ಸಂಗ್ರಹ, ಭೂಲಾಭ, ರಾಜಾಹ್ವಾನ. ೭ನೇ ಶನಿ- ಸ್ತ್ರೀ, ಪುತ್ರಪೀಡೆ, ವಿಘ್ನ, ಅಧಿಕಾರಿ ಪಿಟ್ಟು, ಮಾರ್ಪಾಟುಗಳು.

**ಕುಂಭ**— ೩ನೇ ಗುರು- ಹಣದುಬ್ಬರ. ವ್ಯಾಪಾರ ಉದ್ಯೋಗ ಸೂಕ್ತವಿಲ್ಲ. ೬ನೇ ಶನಿ- ಪರಾಶ್ರಯ, ಆಪಾದನೆ, ಖರ್ಚು, ಚಿಂತೆ, ಮಾರ್ಗಾಯಾಸ.

**ಮೀನ**— ೨ನೇ ಗುರು- ಧನಾಗಮ, ಆಹ್ವಾನ, ಮೆಚ್ಚುಗೆ, ಕಾರ್ಯಾಪೇಕ್ಷೆ, ನಿರ್ಗಮನ. ೫ನೇ ಶನಿ- ಚಿಂತೆ, ದೂರು, ಅವಿಶ್ವಾಸ, ವಾದ, ಕುಹಕ, ಯತ್ನ ನಾಶ.

## ಪತ್ರಿಕೆ ಚಿರಾಯುವಾಗಲೆಂದು ಹರಸಿ ಹಾರೈಸಿ
## " ಆಜೀವ ಸದಸ್ಯರ ಬಳಗ" ಕ್ಕೆ
## ಸೇರಿದ ನಮ್ಮ ಪೋಷಕ ಮಹಾಶಯರುಗಳು

(ಮುಂದುವರೆದ ಪಟ್ಟಿ)

91. ಶ್ರೀ ಟಿ. ಚಂದ್ರಕಾಂತ,
ಮಲ್ಲೇಶ್ವರಂ, ಬೆಂಗಳೂರು-3

92. ಶ್ರೀ ಹೆಚ್. ಟಿ. ಎಸ್. ರಾವ್,
ಸದಾಶಿವನಗರ, ಬೆಂಗಳೂರು-6

93. ಶ್ರೀ ಎಸ್. ಎಂ. ಕುಮಾರ್,
ಅಲಸೂರು, ಬೆಂಗಳೂರು-8

94. ಶ್ರೀ ಹೆಚ್. ನಾರಾಯಣಪ್ಪ,
ಜೋರಿಪೇಟೆ, ಬೆಂಗಳೂರು-2

95. ಶ್ರೀ ಎಂ. ಅಶ್ವತ್ಥನಾರಾಯಣ,
ಮಾಮೂಲ್‌ಪೇಟೆ, ಬೆಂಗಳೂರು-2

96. ಶ್ರೀ ಕೆ. ಶ್ರೀನಿವಾಸ,
ಪಾದರಾಯನಪುರ, ಬೆಂಗಳೂರು-26

97. ಮೆ|| ಸತ್ಯನಾರಾಯಣ ಗ್ರೈಂಡಿಂಗ್ ವರ್ಕ್ಸ್
ಕಠಾರಿಗುಪ್ಪ, ಬೆಂಗಳೂರು ಸೌತ್

98. ಶ್ರೀ ನಾಗರಾಜಪ್ಪ, ಮರ್ಚೆಂಟ್,
ವಿಜಯಪುರ

99. ಶ್ರೀ ಕೆ. ಎಂ. ರೇವಣಸಿದ್ದಯ್ಯ,
ಸರಸ್ವತೀಪುರಂ, ಮೈಸೂರು-9

100. ಶ್ರೀ ಎ. ಎಸ್. ನಾಗರಾಜು S/o
ಸಿದ್ದರಾಮಯ್ಯ ಅಳಿಲಘಟ್ಟ, ಗುಬ್ಬಿ ತಾ||

101 ಶ್ರೀ ಕೆ. ಎಸ್. ಕೃಷ್ಣಮೂರ್ತಿ S/o
ಶ್ರೀಕಂಠಯ್ಯ
ಕೊಡಿಯಾಲ, ಗುಬ್ಬಿ ತಾ||

102. ಶ್ರೀ ಕೆ. ಎಸ್. ಶಿವಣ್ಣ S/o ಸೂರಪ್ಪ
ಕೊಡಿಯಾಲ, ಗುಬ್ಬಿ ತಾ||

103. ಕೆ. ಕೆ. ಬಸವರಾಜು S/o ಕೆಂಪಣ್ಣ
ಕೊಡಿಯಾಲ, ಗುಬ್ಬಿ ತಾ||

104. ಶ್ರೀ ಕೆ. ಜಿ. ಸಿದ್ದಪ್ಪ S/o ಗಡೇಗೌಡ
ಕೊಡಿಯಾಲ, ಗುಬ್ಬಿ ತಾ||

105. ಶ್ರೀ ನಾರಾಯಣಪ್ಪ S/o ಸಿದ್ದಯ್ಯ
ಕೊಡಿಯಾಲ, ಗುಬ್ಬಿ ತಾ||

106. ಶ್ರೀ ಕೆ. ಆರ್. ಕಂಗಣ್ಣ S/o ಜಿ. ರಂಗಣ್ಣ
ಕೊಡಿಯಾಲ, ಗುಬ್ಬಿ ತಾ||

107. ಶ್ರೀ ಎಂ. ಜಿ. ರಂಗಣ್ಣ S/o ಗಾಡಿಯಪ್ಪ
ಚೇಳೂರು, ಗುಬ್ಬಿ ತಾ||

108. ಶ್ರೀ ಬಿ. ಎ. ನರಸಿಂಹಮೂರ್ತಿಶೆಟ್ಟಿ
ಎಂ. ಎನ್. ಕೋಟೆ, ಗುಬ್ಬಿ ತಾ||

109. ಶ್ರೀ ಎಸ್. ಎಸ್. ಬಸವರಾಜಪ್ಪ S/o
ಸಿದ್ಧರಾಮಣ್ಣ, ಶ್ಯಾನಭೋಗನಹಳ್ಳಿ
ಗುಬ್ಬಿ ತಾ||

110. ಶ್ರೀ ಎಂ. ಶಿವಣ್ಣ S/o ಮುದ್ದಪ್ಪ
ಹೆಸರಳ್ಳಿ, ಗುಬ್ಬಿ ತಾ||

(ಮುಂದುವರೆಯುವುದು)

SIDDAGANGA Monthly, Siddaganga mutt. KRN Q-9.
Registered with the Registrar of News papers for under India No. 17139/69

ಈ ಶುಭ ಸಂದರ್ಭದಲ್ಲಿ ನಮ್ಮ ಎಲ್ಲಾ ಗ್ರಾಹಕರಿಗೆ ಮತ್ತು
ಪ್ರೋತ್ಸಾಹಿಗಳಿಗೆ ಹೃತ್ಪೂರ್ವಕವಾದ ಧನ್ಯವಾದಗಳು.

# ಕೆಂಚಾಂಬ ಲಾಡ್ಜ್

ನಂ 197, ಸುಬೇದಾರ್ ಛತ್ರಂ ರಸ್ತೆ, (ಕಪಾಲಿ ಸಿನೆಮಾ ಪಕ್ಕದಲ್ಲಿ)
ಗಾಂಧಿನಗರ — ಬೆಂಗಳೂರು-9.

ಫೋನ್ 27082. ಗ್ರಾಂ KENCHMLODG




- ಸೌಜನ್ಯಪೂರ್ಣವಾದ ಸೇವೆ
- ಶುಚಿ ರುಚಿಯಾದ ಸಸ್ಯಾಹಾರ
- ಬಸ್ ಮತ್ತು ರೈಲು ನಿಲ್ದಾಣಗಳಿಗೆ ಅತಿ ಸಮೀಪ
- ನಗರದ ಕೇಂದ್ರ ವಾಣಿಜ್ಯ ಹಾಗೂ ಮನರಂಜನೆಯ ಸ್ಥಳದಲ್ಲಿದೆ
- ವಿಶಾಲವಾದ ಕೊಠಡಿಗಳು (ಬಾತ್ ರೂಂ ಸಹಿತ)
- ಶಾಂತ ವಾತಾವರಣ: ಉತ್ತಮ ಗಾಳಿ, ಬೆಳಕು
- ಕಾರ್ ಪಾರ್ಕಿಂಗ್ ಕಡಿಮೆ ದರಗಳು ಇತ್ಯಾದಿ

